# ಮುನ್ನುಡಿ

ಐಸ್ಯಾಕ್ ಭಾಷೆವಿಸ್ ಸಿಂಗರ್ ವಿಶ್ವವಿಖ್ಯಾತ ಸಣ್ಣಕತೆಗಾರ, ಕಾದಂಬರಿಕಾರ. ಇವನು 1978ರ ಸಾಹಿತ್ಯ ಕ್ಷೇತ್ರದ ನೊಬೆಲ್ ಪ್ರಶಸ್ತಿಯ ವಿಜೇತ. ಮೊದಲಬಾರಿಗೆ ಇವನ ಕೆಲವು ಸಣ್ಣಕತೆಗಳನ್ನು ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುತ್ತಿದ್ದಾರೆ. ಅವರು ಕೇಳಿದಂತೆ ಸಿಂಗರ್‌ನನ್ನು ಕುರಿತು ಪರಿಚಯಾತ್ಮಕವಾಗಿ ಕೆಳಗಿನ ಕೆಲವು ಮಾತುಗಳನ್ನು ಈ ಸಂಕಲನದ ಓದುಗರ ಮುಂದೆ ಇಡುತ್ತಿದ್ದೇನೆ.

ಸಿಂಗರ್ 1904ರಲ್ಲಿ ಪೋಲೆಂಡಿನ ಲುಬ್ಲಿನ್ ಎಂಬ ನಗರದಲ್ಲಿ ಹುಟ್ಟಿದ. ಇವನು ಯೆಹೂದಿ. ಇವನ ತಂದೆ ತಾತಂದಿರು ಯೆಹೂದಿಗಳ ಧರ್ಮ ಮತ್ತು ನ್ಯಾಯಶಾಸ್ತ್ರಗಳಲ್ಲಿ ಪರಿಣತರು. ಇವನ ತಂದೆಯ ನ್ಯಾಯಾಲಯದ ಬಾಗಿಲ ಹೊರಗೆ ನಿಂತು ಅರ್ಜಿದಾರರ ಹೇಳಿಕೆಗಳನ್ನು ಹುಡುಗನಾಗಿದ್ದಾಗ ಇವನು ಕೇಳಿಸಿಕೊಳ್ಳುತ್ತಿದ್ದನಂತೆ. ಇವನೂ ವಾರ್ಸಾದ ಯೆಹೂದಿ ಶಾಸ್ತ್ರ ವಿದ್ಯಾಲಯದಲ್ಲಿ ಓದಿದ. ಇವನ ಅಣ್ಣ ಇಸ್ರೇಲ್ ಜೋಷ್ವಾ ಸಿಂಗರ್ ಒಳ್ಳೆಯ ಕಾದಂಬರಿಕಾರ. ಅಣ್ಣನನ್ನು ಇವನು ತನ್ನ ಗುರುವೆಂದು ಕರೆದಿದ್ದಾನೆ. ಅಣ್ಣನಂತೆ ಇವನೂ ಪೋಲೆಂಡಿನಿಂದ ಅಮೇರಿಕಾಕ್ಕೆ ವಲಸೆ ಹೋದ. 1935ರಲ್ಲಿ ಇವನು ಹೀಗೆ ಅಮೇರಿಕಾಕ್ಕೆ ಬಂದುದು. ನ್ಯೂಯಾರ್ಕಿನಲ್ಲಿ ಇವನ ವಾಸ. ಇವನು ಒಟ್ಟು ಕಾದಂಬರಿಗಳನ್ನೂ ಏಳು ಕಥಾ ಸಂಕಲನಗಳನ್ನೂ ತನ್ನ ಜೀವನ ಸ್ಮೃತಿಗಳ ನಾಲ್ಕು ಭಾಗಗಳನ್ನೂ ಇಲ್ಲಿಯವರೆಗೆ ಬರೆದಿದ್ದಾನೆ.

ಇವನು ಬರೆಯುವ ಭಾಷೆ ಯಿಡ್ಡಿಷ್. ಯೆಹೂದಿಗಳ ಅತ್ಯಂತ ಪ್ರಾಚೀನ ಮತ್ತು ಅತ್ಯಂತ ಹೆಚ್ಚಿನ ಬಳಕೆಯ ಭಾಷೆ ಹೀಬ್ರೂ. ಆದರೆ ರಷ್ಯಾ ಪೋಲೆಂಡ್ ಪ್ಯಾಲೆಸ್ಟೈನ್ ಅಮೇರಿಕಾಗಳ ಕೆಲವು ಯೆಹೂದಿಗಳು ಯೂರೋಪಿನಲ್ಲಿ ಮಧ್ಯ ಯುಗದಿಂದೀಚೆಗೆ ಬಳಕೆಗೆ ಬಂದ ಮಿಶ್ರತಳಿಯ ಯಿಡ್ಡಿಷ್ ಭಾಷೆಯನ್ನು ಆಡುತ್ತಾರೆ. ಈ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಯಾದುದು ಕಳೆದ ಶತಮಾನ ಉತ್ತರಾರ್ಧದಿಂದೀಚೆಗೆ. ಬಾಲಸುಬ್ರಹ್ಮಣ್ಯ ಅನುವಾದಿಸಿರುವ 'ಉಪನ ಕತೆಯ ನಾಯಕ ಮಾಡಬೇಕಾಗಿದ್ದ ಉಪನ್ಯಾಸದ ವಸ್ತು 'ಯಿಡ್ಡಿಷ್ ಭಾ ಭವಿಷ್ಯ'. ಈ ಭಾಷೆಯ ಭವಿಷ್ಯ ಅಷ್ಟೇನೂ ಆಶಾದಾಯಕವಾದುದ ಪ್ರಾಯಶಃ ಸಿಂಗರ್‌ನೇ ಇದರ ಕೊನೆಯ ಮಹತ್ವದ ಲೇಖಕನಾದರೆ ನಾವು ಆಶ್ಚರ್ಯಪಡಬೇಕಾಗಿಲ್ಲ.

ಸಿಂಗರ್‌ನ ಮೊದಲ ಕಾದಂಬರಿ 'ಗೋರೆಯಲ್ಲಿ ಸೈತಾನ' 1935 ರಲ್ಲಿಯ ವಾರ್ಸಾದಲ್ಲಿ ಪ್ರಕಟವಾಯಿತು. ಆದರೆ ಅವನ ಮೊದಲ ಇಂಗ್ಲೀಷಿಗೆ ಅನುವಾದ ವಾಗಿ ಪ್ರಕಟವಾದ ಕಾದಂಬರಿ, 'ದಿ ಫ್ಯಾಮಿಲಿ ಮಾಸ್ಕಾಟ್' (1950). ಇವನು ಪ್ರಸಿದ್ಧಿಗೆ ಬಂದುದು ಇವನ ಸಣ್ಣಕತೆ 'ಮುಗ್ಧ ಜಿಂಪೆಲ್', 195 ರಲ್ಲಿ ಇಂಗ್ಲೀಷಿಗೆ ಅನುವಾದವಾಗಿ ಪ್ರಕಟವಾದಾಗ. ಇದನ್ನು ಅನುವಾ ಮಾಡಿದವನು ನೊಬೆಲ್ ಪ್ರಶಸ್ತಿ ವಿಜೇತ ಅಮೇರಿಕನ್ ಯೆಹೂದಿ ಕಾದಂಬರಿ ಕಾರ ಸಾಲ್‌ಬೆಲ್ಲೊ. ಸಿಂಗರ್‌ನ ಕಾದಂಬರಿಗಳು ಹದಿನೇಳನೆ ಶತಮಾನದಿಂದ ಎರಡನೇ ಜಾಗತಿಕ ಯುದ್ಧದ ಮುಕ್ತಾಯದವರೆಗೆ ಪೋಲೆಂಡಿನ ಯೆಹೂದಿಗಳು ಅನುಭವಿಸಿದ ಹಿಂಸಾಚಾರಗಳನ್ನು ನಿರೂಪಿಸುತ್ತವೆ. 'ಶತ್ರುಗಳು' ಎನ್ನುವ ಇತ್ತೀಚಿನ ಕಾದಂಬರಿಯೊಂದು ಅಮೇರಿಕಾಕ್ಕೆ ವಲಸೆ ಬಂದವನೊಬ್ಬನ ಜೀವನ ವನ್ನು ಚಿತ್ರಿಸುತ್ತದೆ. ಇವನ ಸಣ್ಣಕತೆಗಳು ಸಾಮಾನ್ಯಜನರ ಜೀವನದ ಭಾವ ತೀವ್ರತೆಯ ಘಟ್ಟಗಳನ್ನು ಅಭಿವ್ಯಕ್ತಿಸುತ್ತವೆ. ಇವನ ಯಶಸ್ವಿ ಸಣ್ಣಕತೆಗಳ ಐದಾರನ್ನು ಮಾತ್ರ ಹೆಸರಿಸಬೇಕಾದರೆ 'ಮುಗ್ಧ ಜಿಂಪೆಲ್', ಕಾಫ್ಕಾನ ಸ್ನೇಹಿತ', 'ಏಕಾಕಿ', ಕಾಕಡೂಡಲ್‌ಡೂ', 'ಕ್ರಾಕೋವಿನಿಂದ ಬಂದ ಒಬ್ಬ ಸಭ್ಯ' ಮತ್ತು 'ಸಿಯಾನ್ಸ್' ಇವುಗಳನ್ನು ಹೆಸರಿಸಬಹುದು.

ಇತರ ಯಿಡ್ಡಿಷ್ ಸಾಹಿತಿಗಳಿಗೂ ಸಿಂಗರ್‌ಗೂ ಅವರ ನಿಲುವಿನಲ್ಲಿಯೂ, ಅವರ ಕಲ್ಪನಾ ಪ್ರಪಂಚದ ಸ್ವರೂಪದಲ್ಲಿಯೂ ಅವರ ಶೈಲಿಯಲ್ಲಿಯೂ ಭಿನ್ನತೆ ಕಾಣುತ್ತದೆ. ಸಿಂಗರ್‌ನ ಕಲ್ಪನಾ ಪ್ರಪಂಚ ಗ್ರಾಮೀಣ ಪೋಲೆಂಡಿನ ಜಾನಪದ ಕಲ್ಪನಾ ಪ್ರಪಂಚ. ಹಿಂದೆ ಜನ ನಂಬುತ್ತಿದ್ದ ಭೂತಗಳೂ ಅವನ ಕೃತಿಗಳಲ್ಲಿ ತಮ್ಮ ಚೇಷ್ಟೆ ನಡೆಸುತ್ತವೆ. ಒಂದು ಮಟ್ಟದಲ್ಲಿ ಅವು ಪ್ರತೀಕಗಳಾಗಿ ಬಳಸಲ್ಪಡುತ್ತವೆ ಎನ್ನುವುದನ್ನೂ ನಾವು ಮರೆಯಬಾರದು ಎನ್ನಿ. ಒಂದು ದೃಷ್ಟಿಯಿಂದ ಅವನ ಜೀವನದರ್ಶನ ಸಾಂಪ್ರದಾಯಿಕ. ಅವನನ್ನು ಧಾರ್ಮಿಕ ಸಾಹಿತಿ ಎನ್ನಲೂಬಹುದು. ಅವನಿಗೆ ದೇವರಲ್ಲಿ ಮತ್ತು ಆತ್ಮದ ಅಮರತ್ವದಲ್ಲಿ ನಂಬಿಕೆ ಇದೆ. ಅವನನ್ನು ಮುಖ್ಯವಾಗಿ ಕಾಡುವುದು ಜೀವನದಲ್ಲಿ ನಿರಂತರವಾಗಿರುವ ನೋವು. ವಿಜ್ಞಾನದಲ್ಲಿ ಎಷ್ಟೇ ಪ್ರಗತಿಯಾದರೂ ನಮ್ಮ ಭೌತಿಕ ಪರಿಸರ ಅಭಿವೃದ್ಧಿಯಾಗಬಹುದೇ ವಿನಾ ನಮ್ಮ ಜೀವನದ ಸಂಕಟಗಳು ಪರಿಹಾರವಾಗುವುದಿಲ್ಲ ಎಂದು ಸಿಂಗರ್ ಹೇಳುತ್ತಾನೆ. ಭಾರತೀಯರಾದ ನಮಗೆ ಸ್ವಾರಸ್ಯವಾದ ಸಂಗತಿಯೆಂದರೆ ಸಿಂಗರ್ ಭಗವದ್ಗೀತೆ ಮತ್ತು ಬೌದ್ಧ ಸಾಹಿತ್ಯದ ಬಗ್ಗೆ ಮಾತಾಡುತ್ತ ತನ್ನ ವಿಚಾರಗಳಿಗೂ ಇವುಗಳಲ್ಲಿನ ವಿಚಾರಗಳಿಗೂ ಎಷ್ಟು ಸಾಮರಸ್ಯ ಇದೆ ಎಂದರೆ ತಾನು ಹಿಂದಿನ ಜನ್ಮದಲ್ಲಿ ಇವುಗಳನ್ನು ಅಧ್ಯಯನ ಮಾಡಿದ್ದಿರಬಹುದು ಎಂದೆನ್ನಿಸುತ್ತದೆ ಎನ್ನುವುದು. ಇವನ ಸಂವೇದನೆ ಎಷ್ಟು ಆಧುನಿಕವೋ ಇನ್ನೊಂದು ದೃಷ್ಟಿಯಿಂದ ಅಷ್ಟೇ ಪ್ರಾಚೀನ.

ಸಣ್ಣಕತೆಗಳಲ್ಲಿ ಇವನ ಕಥನಕಲೆ ಜಾನಪದ ಸಂಪ್ರದಾಯದ್ದು, ಎಂದರೆ ಒಬ್ಬರು ಇತರರಿಗೆ ಹೇಳುತ್ತಾ ಹೋಗುವಂತೆ ಇವನು ಕತೆಗಳನ್ನು ನೇರವಾಗಿ ನಿರೂಪಿಸುತ್ತಾನೆ. ಒಮ್ಮೊಮ್ಮೆ ಹೇಳುವವರು ಕೇಳುವವನು (ರು) ಇರುವಂತೆ ಚೌಕಟ್ಟಿರಬಹುದು, ಹೆಚ್ಚಾಗಿ ಹೀಗೆ ಇಲ್ಲದಿರಬಹುದು. ವಸ್ತುವಿನಲ್ಲಾಗಲೀ ತಂತ್ರದಲ್ಲಾಗಲೀ ಇವನನ್ನು ನವ್ಯ ಎನ್ನಲಾಗುವುದಿಲ್ಲ. ಇವನಿಗೆ ಕತೆ ನಿಜವಾಗಿ ಕತೆಯಾಗಿರಬೇಕು. ಕಥಾಸ್ವಾರಸ್ಯವಿಲ್ಲದಿದ್ದರೆ ಎಂಥಾ ಕತೆ ಎನ್ನುತ್ತಾನೆ. ಹೆಚ್ಚಿನ ಕತೆಗಳಲ್ಲಿ ಕೊನೆಯಲ್ಲಿ ಅನಿರೀಕ್ಷಿತವಾದ ತಿರುವು ಬರುತ್ತದೆ. ಇಷ್ಟಾದರೂ ಇವನ ಕತೆಗಳು ಅಪರೂಪದ ಮಾನಸಿಕ ಸ್ಥಿತಿಗಳ ಆಳವಾದ ಪರಿಶೋಧನೆಯಿಂದಲೂ, ಪ್ರತೀಕಗಳ ಸೃಷ್ಟಿಯಿಂದಲೂ, ಫ್ಯಾಂಟಸಿ ಅಥವಾ ಅದ್ಭುತ

ಅಂಶಗಳ ಬಳಕೆಯಿಂದಲೂ ನವ್ಯವಾಗುತ್ತವೆ ಎಂದೂ ಭಾಸವಾಗದಿರದು. ತನ್ನ ಕಲೆಯ ಬಗ್ಗೆ ಮಾತಾಡುತ್ತಾ ತನ್ನ ಅಣ್ಣನ ಹಿತವಚನವೊಂದನ್ನು ಅವನು ನೆನೆಯುತ್ತಾನೆ. ಅದೇನೆಂದರೆ 'ವಿವರಗಳನ್ನು ಕೊಡಬೇಕು ವಿವರಣೆಯನ್ನಲ್ಲ'. ಸಿಂಗರ್ ಏನು ನಡೆಯಿತು ಎಂಬುದನ್ನು ಹೇಳುತ್ತಾನೆಯೇ ಹೊರತು ಅದು ಏಕೆ ಹಾಗೆ ನಡೆಯಿತು ಎಂದು ಮನೋವೈಜ್ಞಾನಿಕವಾಗಿ ವಿವರಣೆ ಕೊಡಲು ಹೋಗುವುದಿಲ್ಲ. ಇದು ಎಲ್ಲ ಉತ್ತಮ ಸಾಹಿತ್ಯದ ಮುಖ್ಯಗುಣ ಎಂದು ಅವನ ಭಾವನೆ.

ಇವನ ಹಿಂದಿನ ಯಿಡ್ಡಿಷ್ ಲೇಖಕರು ಹೆಚ್ಚಾಗಿ ವಿಜ್ಞಾನದ ಮುನ್ನಡೆಯಲ್ಲಿ ವಿಶ್ವಾಸವುಳ್ಳವರು. ಅವರು ಶೋಷಣೆಗೊಳಗಾದ ಯೆಹೂದಿಗಳ ಚಿತ್ರಗಳನ್ನು ಸಾಮಾನ್ಯವಾಗಿ ಕೊಡುವುದುಂಟು. ಸಿಂಗರ್ ಪ್ರಕಾರ ವಿಜ್ಞಾನ ಈಗ ಒಪ್ಪದ ನಂಬಿಕೆಗಳನ್ನೂ ಮುಂದೆ ವಿಜ್ಞಾನ ಒಪ್ಪಬಹುದು. ಅವನ ಪಾತ್ರಗಳು ವಿಶಿಷ್ಟ ಮನೋಭಾವದ ಪಾತ್ರಗಳು. ಸಾಮಾನ್ಯ ಪಾತ್ರಗಳಾದರೂ ಒಂದು ಪರಿಸ್ಥಿತಿಯಲ್ಲಿ ಅವರ ಪ್ರತಿಕ್ರಿಯೆಯ ವೈಶಿಷ್ಟ್ಯದಿಂದ ಅವರು ದುರಂತ ನಾಟಕಗಳ ನಾಯಕರಂತೆ ಘನತೆಯನ್ನು ಪ್ರದರ್ಶಿಸುತ್ತಾರೆ. ಸಿಂಗರ್‌ನ ಪ್ರಕಾರ ಮಾನವ ಜೀವನದಲ್ಲಿ ಎಷ್ಟೇ ನೋವಿದ್ದರೂ ಕೇಡಿದ್ದರೂ ಒಂದು ಭಾಗ್ಯವೂ ಇದೆ. ಅದು ನಮ್ಮ ಸಂಕಲ್ಪಶಕ್ತಿಯ ಸ್ವಾತಂತ್ರ್ಯ, ನಮ್ಮ ಆಯ್ಕೆಯ ಜವಾಬ್ದಾರಿ.

ಪ್ರಸ್ತುತ ಸಂಕಲನದ 'ಉಪನ್ಯಾಸ' ಎಂಬ ಕತೆ ಸಿಂಗರ್‌ನ ಕಾದಂಬರಿಗ್ಳ ಪ್ರಪಂಚವನ್ನು ಪುನಃಸೃಷ್ಟಿಸುತ್ತದೆ. ಇದರ ಕಥಾನಾಯಕ ಸಿಂಗರ್‌ನಂತೆಯೇ ಯಿಡ್ಡಿಷ್ ಕತೆಗಾರ. ಮಾಂಟ್ರಿಯಲ್ ಅನ್ನು ಅವನು ತಲುಪುವುದಕ್ಕೆ ತಡವಾಗಿ ಆ ಚಳಿಗಾಲದ ಮಧ್ಯರಾತ್ರಿಯಲ್ಲಿ ಅವನನ್ನು ಸ್ವಾಗತಿಸಲು ಉಳಿದಿರುವವಳು ಊರೆಗೋಲುಗಳನ್ನು ಆಶ್ರಯಿಸಿರುವ ಒಬ್ಬ ಮುದುಕಿ ಮತ್ತು ಅವಳ ಮಗಳು. ಅವರು ಅವನನ್ನು ತಮ್ಮ ಬಡನಿವಾಸಕ್ಕೆ ಕರೆದೊಯ್ಯುತ್ತಾರೆ. ಹಿಟ್ಲರ್ ತನ್ನ ಅಧಿಕಾರ ವ್ಯಾಪ್ತಿಗೊಳಗಾದ ಪ್ರದೇಶಗಳ ಯೆಹೂದಿಯರನ್ನು ಚಿತ್ರಹಿಂಸೆ ಕೊಟ್ಟು ಸಾಯಿಸಲು ಏರ್ಪಡಿಸಿದ್ದ ಭಯಂಕರ ಕ್ಯಾಂಪುಗಳಲ್ಲಿ ಕುಪ್ರಸಿದ್ಧವಾದ ಆಶ್ಕ್ವಿಜ್ ಕ್ಯಾಂಪಿನಲ್ಲಿ ಈ ಮುದುಕಿಯೂ ಅವಳ ಮಗಳೂ ಪಡಬಾರದ ಕಷ್ಟ

ಗಳನ್ನು ಪಟ್ಟು ಹೇಗೋ ಪಾರಾಗಿ ಕೆನಡಾಕ್ಕೆ ವಲಸೆ ಬಂದಿರುವವರು. ಅವನು ಅವರ ನಿವಾಸದಲ್ಲಿ ಕಳೆಯುವ ರಾತ್ರಿ ಮುದುಕಿ ಸತ್ತು ಮಗಳು ಬಿನಿಲಿ ಅನಾಥ ಳಾಗುತ್ತಾಳೆ. ಆ ರಾತ್ರಿಯ ಪರಿಸ್ಥಿತಿಯಲ್ಲಿ ಕತೆಯ ನಾಯಕನಿಗೆ ಅವನು ಅಮೇರಿಕಾಕ್ಕೆ ವಲಸೆ ಬಂದು ಅಲ್ಲಿ ವಾಸಿಸುತ್ತಿದ್ದ ಕಾಲವೆಲ್ಲಾ ಕನಸಿನಂತೆ ಕರಗಿ ಹೋಗಿ ತಾನು ಬಿಟ್ಟುಬಂದಿದ್ದ ಹಿಟ್ಲರನ ಹತ್ಯಾಕಾಂಡಗಳ ಘೋರಪ್ರಪಂಚದ ಪ್ರತ್ಯಕ್ಷಾನುಭವವಾಗಿ ಅದೇ ಸತ್ಯವಾಗಿ ತೋರುತ್ತದೆ. ಆಸ್ಕ್ವಿಜ್‌ನಲ್ಲಿ ಅವಳ ಸಂಖ್ಯೆಯನ್ನು ಹಚ್ಚಿ ಹಾಕಿದ್ದ ಬಿನಿಲಿಯ ಕೆಳತೋಳನ್ನು ಹಿಡಿದು ಆತನು ತನ್ನ ಬಾಯಿಂದ ಹೊರಟ 'ಬಿನಿಲಿ ನಿನ್ನನ್ನು ಕೈ ಬಿಡುವುದಿಲ್ಲ, ನಿನ್ನ ತಾಯಿಯ ಆತ್ಮದಾಣೆಗೂ,' ಎಂಬ ಮಾತುಗಳನ್ನು ಕೇಳಿಸಿಕೊಳ್ಳುತ್ತಾನೆ. ಹಿಟ್ಲರ್‌ನ ಕೆಳಗೆ ಪೋಲಿಷ್ ಯೆಹೂದಿಗಳು ಇತರ ಆಕ್ರಮಿತ ಪ್ರದೇಶಗಳ ಮತ್ತು ಜರ್ಮನ್ ಯೆಹೂದಿಗಳಂತೆ ಅನುಭವಿಸಿದ ನರಕಯಾತನೆ ಸಿಂಗರ್‌ನನ್ನು ನಿರಂತರ ಕಾಡು ವುದರ ಪ್ರತೀಕವಾಗಿ ಈ ಕತೆ ಮುಖ್ಯವಾಗುತ್ತದೆ. ಬದುಕು ಒಡ್ಡಿದ ಅತ್ಯಂತ ಕಠಿಣ ಸವಾಲುಗಳನ್ನು ಧೈರ್ಯದಿಂದ ಎದುರಿಸಿದ ಮುದುಕಿಯ ಪಾತ್ರ ಗಂಭೀರ ವಾದರೂ ವಾಸ್ತವವಾಗಿ ಚಿತ್ರಿಸಲ್ಪಟ್ಟಿದೆ. ಎರಡನೆಯ ಜಾಗತಿಕ ಯುದ್ಧದ ನಂತರ ಯೆಹೂದಿಗಳನ್ನಿಟ್ಟಿದ್ದ ಕ್ಯಾಂಪುಗಳಿಗೆ ಪುಸ್ತಕಗಳನ್ನು ಕಳುಹಿಸಿಕೊಟ್ಟಾಗ ಈ ಮುದುಕಿ ಕತೆಯ ನಾಯಕನ ಒಂದು ಕತೆಯನ್ನು ಓದಿ ಒಂದು ನಿಧಿ ಸಿಕ್ಕಷ್ಟು ಸಂತೋಷಪಟ್ಟಿದ್ದಳು ಎಂಬುದು ಸ್ವಾರಸ್ಯವಾದ ಸಂಗತಿ. ಕತೆಯ ಕೊನೆಯ ಮಾತುಗಳಲ್ಲಿ ಅವಳು ಅವನ ಬರವಿಗಾಗಿ ಮತ್ತು ಅವನಿಗೆ ಮಗಳನ್ನು ಒಪ್ಪಿಸುವುದಕ್ಕಾಗಿ ಮಾತ್ರ ಸಾಯದೆ ಉಳಿದಿದ್ದಳೋ ಎಂದು ಭಾಸವಾಗಿ ಕತೆಯ ಜೀವನ ಚಿತ್ರಣಕ್ಕೆ ಒಂದು ರಹಸ್ಯಮಯ ಆಯಾಮ ಒದಗಿಬರುತ್ತದೆ.

ಇಂಥದೇ ಒಂದು ರಹಸ್ಯಮಯ ಆಯಾಮವಿರುವ ಇನ್ನೆರಡು ಈ ಸಂಕಲನದ ಕತೆಗಳು 'ಕಟುಕ' ಮತ್ತು 'ಒಂದು ಗಿಳಿಯ ಕತೆ'. 'ದೇವರೇ ಕರುಣೆಗೆ ಮೂಲ ವಾದುದರಿಂದ ದೇವರಿಗಿಂತ ಮನುಷ್ಯ ಹೆಚ್ಚು ಕರುಣಾಮಯಿಯಾಗುವು ದಾಗದು' ಎಂಬ ನುಡಿಯನ್ನು ಆಳವಾಗಿ ಶೋಧಿಸುವ ಕತೆ 'ಕಟುಕ' ಭಗ ವದ್ಗೀತೆಯ ಅರ್ಜುನನ ವಿಷಾದಯೋಗವನ್ನೂ, ಯಜ್ಞಯಾಗಾದಿಗಳನ್ನು ಎದುರಿಸುವ ಬೌದ್ಧ ಜೈನ ನಿಲುವನ್ನೂ ಈ ಕತೆಯ ಪಾತ್ರಚಿತ್ರಣ ನೆನಪಿಗೆ

ತರುತ್ತದೆ. 'ಉಪನ್ಯಾಸ'ದ ನಾಯಕ ಸಿಂಗರ್‌ನಂತೆಯೇ ಯಿಡ್ಡಿಷ್ ಕತೆಗಾರನಾದರೆ 'ಕಟುಕ'ದ ನಾಯಕ ಸಿಂಗರ್ ನಂತೆ ಧರ್ಮಶಾಸ್ತ್ರಜ್ಞರ ಮಗ, ಮೊಮ್ಮಗ. ಇವನೂ ಧರ್ಮನ್ಯಾಯಾಧೀಶನೇ ಆಗಬೇಕಾಗಿದ್ದುದು ತಪ್ಪಿ ಬಲಿಯಾಗಿ ಅರ್ಪಿತವಾಗುವ ಪ್ರಾಣಿಗಳನ್ನು ಕಡಿದುಹಾಕುವ ಕರ್ತವ್ಯವನ್ನು ಅವನು ವಹಿಸಿಕೊಳ್ಳಬೇಕಾಗಿ ಬಂದು ಅವನ ಮನಸ್ಸಿನಲ್ಲಿ ತುಮುಲ ಆರಂಭವಾಗಿ ಕೊನೆಗೆ ಉನ್ಮಾದದ ಮಟ್ಟವನ್ನು ಮುಟ್ಟುತ್ತದೆ. ದೇವರನ್ನು ಕೊಲೆಗಾರನೆಂದು ಕೂಗುತ್ತಾ ಅವನು ರಕ್ತದ ಮಡುವಿನಂತೆ ಅವನ ಉದ್ರಿಕ್ತ ಕಲ್ಪನೆಗೆ ಕಾಣುವ ಹೊಳೆಗೆ ಬೀಳುತ್ತಾನೆ.

'ಒಂದು ಗಿಳಿಯ ಕತೆ'ಯ ನಾಯಕ ಸೈಮನ್‌ನಲ್ಲಿಯೂ ಇಂಥದೇ ಪ್ರಾಣದಯೆಯನ್ನು ಕಾಣುತ್ತೇವೆ. ಸಿಂಗರ್ ನಿಜಜೀವನದಲ್ಲಿ ಪಕ್ಷಿಪ್ರೇಮಿ. ಅವನು ಎರಡು ಗಿಳಿಗಳನ್ನು ಸಾಕಿಕೊಂಡಿದ್ದಾನೆ. ಅವನಂತೆಯೇ ಸೈಮನ್ ತನ್ನ ಮನೆಯನ್ನು ಸೇರಿಕೊಂಡಿದ್ದ ಒಂದು ಗಿಳಿಯನ್ನು ಸಾಕುತ್ತಾನೆ. ಅಚ್ಚುಮೆಚ್ಚಿನ ಹೆಂಡತಿಯನ್ನು ಕಳೆದುಕೊಂಡಿದ್ದ ಏಕಾಕಿಯಾದ ಅವನಿಗೆ ಅದು ಅತ್ಯಂತ ಪ್ರೀತಿಯ ವಸ್ತುವಾಗುತ್ತದೆ. ವಿಧುರ ಜೀವನವೇ ಹೊಂದಿಕೊಂಡಿದ್ದ ಅವನಿಗೆ ವಿಧಿವಶದಿಂದ ಅವನ ಸ್ವಭಾವಕ್ಕೆ ತೀರಾ ವಿರುದ್ಧ ಸ್ವಭಾವದ ಒಂದು ಹೆಣ್ಣು ಆಕರ್ಷಕಳಾಗಿ ಕಂಡು ಅವರಿಬ್ಬರೂ ಪ್ರೇಮಿಸುತ್ತಾರೆ. ಈಗಾಗಲೇ ಒಂದು ಮದುವೆಯಿಂದ ವಿಚ್ಛೇದನವನ್ನು ಅವಳು ಪಡೆದಿದ್ದುದರಿಂದಲೂ, ಅವನು ಪುರೋಹಿತ ಕುಲಕ್ಕೆ ಸೇರಿದವನಾದುದರಿಂದಲೂ ಅವರು ಮದುವೆಯಾಗುವುದು ಅಸಾಧ್ಯವಾದರೂ ಗಂಡ ಹೆಂಡತಿಯರಂತೆಯೇ ಅವರು ಸಂಸಾರ ಮಾಡುತ್ತಾರೆ. ಆದರೆ ಅವರ ಅಭಿರುಚಿ ಆಸಕ್ತಿಗಳ ಭಿನ್ನತೆಯಿಂದ ಅವರ ಸಂಬಂಧ ವಿಷಮಿಸಿ ಮನೆಯೇ ನರಕವಾಗುತ್ತದೆ. ಅವನ ಸಾಕುಗಿಳಿಯ ಮೇಲೆ ಅವಳಿಗೆ ಮಾತ್ಸರ್ಯ, ಭಯಂಕರ ಸಿಟ್ಟು. ಅದರ ತಂಟೆಗೆ ಮಾತ್ರ ಹೋಗಬಾರದೆಂದು ಅವನು ಎಚ್ಚರಿಸಿದ್ದರೂ ಚಳಿಗಾಲದ ಒಂದು ರಾತ್ರಿ ಹಿಮ ಬೀಳುತ್ತಿದ್ದರೂ ಅವಳು ಅವನ ಪ್ರೀತಿಯ ಗಿಳಿಯನ್ನು ಹೊರಹಾಕುತ್ತಾಳೆ. ಅದು ಸಾಯದಿರುವುದು ಹೇಗೆ? ತಿಳಿದ ಕೂಡಲೇ ಸೈಮನ್ ಅವಳನ್ನು ಎತ್ತಿಕೊಂಡು ಹೋಗಿ ಬಾವಿಯಲ್ಲಿ ಕೆಡವಿ ಸಾಯಿಸುತ್ತಾನೆ. ಪೋಲೀಸರ ವಶಕ್ಕೆ ತನ್ನನ್ನು ಒಪ್ಪಿಸಿಕೊಂಡು ಸೆರೆಮನೆ ಸೇರುತ್ತಾನೆ. ಅವಳ ಕೊಲೆಯ ಬಗ್ಗೆ ಅವನಿಗೆ ಪಶ್ಚಾತ್ತಾಪವಿಲ್ಲ. ಅವಳ

ಪ್ರೇತವೂ ಅವನನ್ನು ಕಾಡುವುದೂ ಇಲ್ಲ. ಅವನ ಗಿಳಿ ಮಾತ್ರ ಈಗಲೂ ಆಗಾಗ್ಗೆ ಅವನ ಬಳಿ ಬರುತ್ತಿರುತ್ತದೆ ಎಂದು ಅವನ ನಂಬಿಕೆ. ಸೆರೆಮನೆಯಲ್ಲಿ ಅವನ ಜೊತೆಯ ಮೂವರು ನಾಲ್ವರು ಖೈದಿಗಳಿಗೆ ಅವನು ತನ್ನ ಕತೆಯನ್ನು ಹೇಳಿಕೊಳ್ಳುವಂತೆ ರಚಿತವಾದ ಈ ಕತೆಯಲ್ಲಿ ಜೊತೆಯ ಖೈದಿಗಳು ಸತ್ತಗಿಳಿ ಮತ್ತೆ ಅವನ ಬಳಿಗೆ ಬರುವುದು ಅಸಂಭವವೆಂದರೆ, ಇಲ್ಲ, ಅದು ಸತ್ಯ ಎಂದು ಹೇಳುತ್ತಾನೆ. ಕುದುರೆ ವ್ಯಾಪಾರಿಯಾದ ಸೈಮನ್ ಪ್ರಾಣಿದಯಾಪರ. ತಾನು ಇಟ್ಟುಕೊಂಡಿರುವ ಕುದುರೆಗಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಕುದುರೆಗಳನ್ನು ಕ್ರೂರವಾಗಿ ನಡೆಸಿಕೊಳ್ಳುವವರಿಗೆ ಅವುಗಳನ್ನು ಮಾರನು. ಇಂತಹ ಮೃದುಹೃದಯದವನು ತನ್ನ ಪ್ರೀತಿಯ ಪರಾಕಾಷ್ಠೆಯಿಂದಲೇ ಕ್ರೌರ್ಯಕ್ಕೆ ಪ್ರತಿಕ್ರೌರ್ಯವೆಸಗುವುದನ್ನು ಈ ಕತೆ ಮನವರಿಕೆಯಾಗುವಂತೆ ಚಿತ್ರಿಸುತ್ತದೆ.

ಅನೈತಿಕ ವೃತ್ತಿಯನ್ನು ಕರ್ತವ್ಯವೆಂದೂ, ದಾಕ್ಷಿಣ್ಯಕ್ಕೂ, ಯಾಂತ್ರಿಕವಾಗಿ ನಡೆಸುವ ನಿಷ್ಠಾವಂತ ಹೆಣ್ಣು 'ಯಾಂಡಾ' ಕತೆಯ ಅದೇ ಹೆಸರಿನ ನಾಯಕಿ. ಪೋಲೆಂಡಿನ ಎಲ್ಲೆಯ ಹತ್ತಿರದ ಪಟ್ಟಣವೊಂದರಲ್ಲಿ ಇಟ್ಟಿದ್ದ ಹೋಟೆಲೊಂದರಲ್ಲಿ ಪ್ರತಿಯೊಂದು ಕೆಲಸವನ್ನೂ ಕೊಟ್ಟಷ್ಟು ತೆಗೆದುಕೊಂಡು ಒಬ್ಬಳೇ ನಿಭಾಯಿಸುತ್ತಾ ಹಲವು ವರ್ಷಗಳು ಬಯಸಿದ ಅತಿಥಿಗಳಿಗೆ ಭೋಗ್ಯವಸ್ತುವಾಗಿಯೂ ಬಾಳುತ್ತಿದ್ದ ಯಾಂಡಾ ಹೋಟೆಲು ಮಾಲೀಕರು ಸತ್ತಮೇಲೆ ತಾನು ಹುಟ್ಟಿದೂರಿಗೆ ಮರಳುತ್ತಾಳೆ. ಅಲ್ಲಿ ಅವಳಿಗಾಗಿ ಗೊತ್ತಾಗಿದ್ದ ಗಂಡನ್ನು ಅವಳು ಊರಿನಲ್ಲಿದ್ದಾಗಲೇ ಇನ್ನೊಬ್ಬ ಹೆಣ್ಣು ಆಕರ್ಷಿಸಿ ಮದುವೆಯಾಗಿರುತ್ತಾಳೆ. ಅವಳು ಈಗ ಸತ್ತಿದ್ದಾಳೆ. ಅವಳ ಮಕ್ಕಳಲ್ಲಿ ಒಂಬತ್ತು ಮಕ್ಕಳು ಬದುಕಿವೆ. ತಂದೆ ಕುಡುಕ. ಮಕ್ಕಳಲ್ಲಿ ದೊಡ್ಡವು ತುಂಟರು. ಸಂಸಾರವೇ ಹೊಟ್ಟೆಗೆ ಸಾಕಷ್ಟು ಇಲ್ಲದೆ ಕಷ್ಟದಲ್ಲಿದೆ. ತನ್ನ ಗಂಡನಾಗಬಹುದಾಗಿದ್ದವನ ಮೇಲಿನ ವಿಶ್ವಾಸದಿಂದ ಅವನ ಸಂಸಾರವನ್ನು ತನ್ನ ಉಳಿತಾಯದ ಹಣದಿಂದ ಮತ್ತು ದುಡಿಮೆಯಿಂದ ಸರಿಪಡಿಸಲು ಯತ್ನಿಸುವ ಅವಳನ್ನು ಗಂಡನಾಗಬೇಕಾಗಿದ್ದವನು 'ಸೂಳೆ' ಎಂದು ಕರೆಯುತ್ತಾನೆ. ಒಕ್ಕಣ್ಣಿನ ಒಬ್ಬ ಮಗ ಅವಳ ಮೇಲೆ ಅತ್ಯಾಚಾರವೆಸಗುತ್ತಾನೆ. 'ನಾನು ನಿನ್ನ ತಾಯಿಯಾಗಬಹುದಾಗಿದ್ದವಳು'

ಎಂದು ಅವಳು ಆ ತುಂಟ ಹುಡುಗನನ್ನು ತಡೆಯಲು ಪ್ರಯತ್ನಿಸಿದರೂ ಅವನು ಅವಳನ್ನು ಬಿಡುವುದಿಲ್ಲ. ಯಾರಿಗೂ ಇಲ್ಲ ಎಂದು ಹೇಳಲಾರದ ಸ್ವಭಾವದ ಈ ಹೆಣ್ಣು ಇದೊಂದು ಆಕ್ರಮಣಕ್ಕೆ ಮಾತ್ರ ಒಪ್ಪದೆ ಕೊನೆಯವರೆಗೂ ಹೊಡೆದಾಡುತ್ತಾಳೆ. ಈ ವಿಶಿಷ್ಟಸ್ವಭಾವದ ಹೆಣ್ಣಿನ ಈ ದುರಂತ ಕತೆ ಮರ್ಮಸ್ಪರ್ಶಿ.

ಒಬ್ಬ ಮರ್ಯಾದಸ್ಥ ಕಳ್ಳನ ಕತೆ 'ಜಡೆಬಿಲ್ಲೆ'. ತನ್ನೂರಿನಲ್ಲಿ ಅವನು ಕಳ್ಳನಲ್ಲ. ಪ್ರಾಮಾಣಿಕ. ಕಡಿಮೆ ಆದಾಯದ, ಕೊಳಕಾದ ಚರ್ಮ ಹದಮಾಡುವ ಪ್ರಾಮಾಣಿಕ ವೃತ್ತಿಯಲ್ಲಿದ್ದವನು ಅದನ್ನು ಬಿಟ್ಟು ಬೇರೆ ಊರಿಗೆ ಒಮ್ಮೊಮ್ಮೆ ಹೋಗಿ ಕಳ್ಳತನ ಮಾಡಿ ಬಂದು ತನ್ನೂರಿನಲ್ಲಿ ಸಭ್ಯನಂತೆ ಸಂಸಾರ ನಡೆಸುತ್ತಿದ್ದ. ಇವನಿಗೆ ಒಂದು ಸಲ ಅವನು ಹಣ ಮಾಡಿಕೊಂಡು ಹಿಂದಿರುಗಿದಾಗ ಒಂದು ಮಾನಸಿಕ ಆಘಾತ ಕಾದಿರುತ್ತದೆ. ತನ್ನ ಹೆಂಡತಿ ಆದರ್ಶ ಪತ್ನಿಯೆಂದು ತಿಳಿದಿದ್ದವನಿಗೆ ಅವಳ ಗುಣಶೀಲಗಳ ಬಗ್ಗೆ ಸಂದೇಹ ಹುಟ್ಟಿಸುವ ಸಾಕ್ಷ್ಯ ಅಕಸ್ಮಾತ್ತಾಗಿ ಕೈಗೆ ಸಿಕ್ಕಿ ಅವನ ಪ್ರಪಂಚವೇ ಬುಡಮೇಲಾಗುತ್ತದೆ. ಅನರ್ಘ್ಯವಾದ ಆ ಊರಿನ ಶ್ರೀಮಂತೆಯೊಬ್ಬಳ ಜಡೆಬಿಲ್ಲೆಯನ್ನು ತಾನು ಕದ್ದುದುಂಟೆಂದು ಹೆಂಡತಿ ಒಪ್ಪಿಕೊಂಡು 'ನೀನು ಕಳ್ಳನಾದರೆ ನಾನೇಕೆ ಆಗಬಾರದು?' ಎಂದು ಕೇಳುತ್ತಾಳೆ. ತನ್ನ ಕಳ್ಳತನದ ದುಷ್ಪರಿಣಾಮ ಎಷ್ಟರ ಮಟ್ಟಿಗೆ ತನ್ನ ಸಂಸಾರದ ಮೇಲೆಯೇ ಆಗಿದೆಯೆಂದು ಅರಿತುಕೊಂಡ ಅವನು ತನ್ನ ಕಳ್ಳತನದ ವೃತ್ತಿಯನ್ನು ಕೂಡಲೇ ಬಿಟ್ಟು ಆ ರಾತ್ರಿಯೇ ತನ್ನ ಹೆಂಡತಿಯನ್ನು ಕೂಡಬೇಕೆಂದು ತನಗಿದ್ದ ಅಪಾರ ಆಸೆಯನ್ನು ತ್ಯಜಿಸಿ ತನ್ನ ಹಳೇ ಕೊಳಕು, ಆದರೆ ಪ್ರಾಮಾಣಿಕ ವೃತ್ತಿಗೆ ತೆರಳುತ್ತಾನೆ. ಮನುಷ್ಯನ ಸಂಕಲ್ಪ ಶಕ್ತಿಯ ಸ್ವಾತಂತ್ರ್ಯಕ್ಕೂ ಎಂಥವನಲ್ಲಿಯೂ ಹುದುಗಿರಬಹುದಾದ ಘನತೆಗೂ ಇದು ಒಳ್ಳೇ ಉದಾಹರಣೆ.

ಸಿಂಗರ್‌ನ ಜಾನಪದ ಕಥನ ಕಲೆಯ ದೃಷ್ಟಿಯಿಂದ ಅಭ್ಯಾಸಯೋಗ್ಯ 'ಒಂದು ಸೂಜಿಯ ಕತೆ'. ಒಳ್ಳೆಯ ನಡತೆಯ ಹೆಣ್ಣನ್ನು ತನ್ನ ಸೊಸೆಯಾಗಲು ಆಯ್ಕೆ ಮಾಡುವ ಉದ್ದೇಶದಿಂದ ಒಬ್ಬ ಶ್ರೀಮಂತನ ಹೆಂಡತಿ ಒಂದು ಸೂಜಿಕೊಳ್ಳುವ ನೆವದಲ್ಲಿ ಇಬ್ಬರು ವ್ಯಾಪಾರಿ ತರುಣಿಯರ ಪರೀಕ್ಷೆ ನಡೆಸುವ ಮತ್ತು ವಿನಯ

ಶೀಲೆಯೂ ವ್ಯಾವಹಾರಿಕವಾಗಿಯೂ ವಿವೇಕಿಯೂ ಆದ ಒಬ್ಬಳನ್ನು ಅವರಿಬ್ಬ ರಲ್ಲಿ ಅವಳು ಬಡವಿಯಾದರೂ ತನ್ನ ಮಗನಿಗೆ ತಂದುಕೊಳ್ಳುವ ಈ ಕತೆ ಅಪ್ಪಟ ಜಾನಪದ ಕತೆಯೇ. ಆದರೆ ಕತೆಯನ್ನು ಅಲ್ಲಿಯೇ ಬಿಡದೆ ಸಿಂಗರ್ ಆಯ್ಕೆ ಯಾಗದ ಹೆಣ್ಣಿನ ಮನದ ಮೇಲೆ ಆದ ಆಘಾತವನ್ನು ಶೋಧಿಸುತ್ತಾ ಮುಂದು ವರೆಯುತ್ತಾನೆ. ಅತಿ ಹುಚ್ಚಿಯಾಗಿ ಕಡೆಗೆ ಒಂದು ಬಗೆಯ ಸಮಾಧಾನ ಸ್ಥಿತಿ ಯನ್ನು ಅವಳು ಮುಟ್ಟುವವರೆಗೆ ಅವಳ ಮನಸ್ಸು ಹದಗೆಡುತ್ತಾ ಹೋಗು ವುದನ್ನು ಸಿಂಗರ್ ಅದ್ಭುತವಾಗಿ ಚಿತ್ರಿಸುತ್ತಾನೆ.

ವಿಶಿಷ್ಟ ಸ್ವಭಾವದ ವ್ಯಕ್ತಿಗಳನ್ನು ಅನಿರೀಕ್ಷಿತ ಸನ್ನಿವೇಶಗಳಲ್ಲಿಟ್ಟು ಅವರ ಪ್ರತಿ ಕ್ರಿಯೆಗಳನ್ನು ಪರಿಶೋಧಿಸುವ, ವಿಧಿಯ ವಿಲಾಸದ ನಿಗೂಢತೆಯನ್ನು ಸೂಚಿಸು ವಾಗಲೂ ಮನುಷ್ಯನ ಆಯ್ಕೆಯ ಸ್ವಾತಂತ್ರ್ಯ ಮತ್ತು ಜವಾಬ್ದಾರಿಗಳನ್ನು ಒತ್ತಿ ಹೇಳುವ, ಸಾಮಾನ್ಯ ಜನರ ಅಸಾಮಾನ್ಯತೆಯನ್ನು ಎತ್ತಿ ತೋರಿಸುವ ದೊಡ್ಡವರಲ್ಲ ಎನಿಸುವವರಲ್ಲಿಯೂ ಇರುವ ದೊಡ್ಡತನವನ್ನು ತೋರಿಸಿಕೊಡುವ, ಮನುಷ್ಯ ಸ್ವಭಾವದ ಸಂಕೀರ್ಣತೆಯನ್ನು ಕಲೆಯನ್ನು ಮರೆಮಾಚುವ ಕಲೆಯ ಮೂಲಕ ಅಭಿವ್ಯಕ್ತಿಸುವ ಇಂಥ ಅದ್ಭುತ ಕತೆಗಾರನ ಪರಿಚಯ ಕನ್ನಡಿಗರಿಗೆ ಆಗಬೇಕಾದುದು ಅಗತ್ಯ ಮತ್ತು ಕನ್ನಡ ಸಣ್ಣಕತೆಯ ಬೆಳವಣಿಗೆಯ ಈ ಹಂತ ದಲ್ಲಿ ಸಂದರ್ಭೋಚಿತ. ಆದುದರಿಂದ ಅವನ ಕೆಲವು ಕತೆಗಳನ್ನು ಅನುವಾದಿಸಿ ಪ್ರಕಟಿಸುವ ಜವಾಬ್ದಾರಿಯನ್ನು ಹೊತ್ತಿರುವ ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯರ ಪ್ರಯತ್ನ ಅಭಿನಂದನಾರ್ಹ ಮತ್ತು ಈ ಸಂಕಲನ ಸ್ವಾಗತಾರ್ಹ. ಅನುವಾದದಲ್ಲಿ ನ್ಯೂನತೆಗಳಿವೆ. ಆದರೂ ಈ ಅನುವಾದಿತ ಕತೆಗಳು ಸುಲಭವಾಗಿ ಓದಿಸಿ ಕೊಂಡು ಹೋಗುತ್ತವೆ ಮತ್ತು ತಕ್ಕಷ್ಟು ಪ್ರಮಾಣದಲ್ಲಿ ಉದ್ದಿಷ್ಟ ಪರಿಣಾಮ ವನ್ನು ಮೂಡಿಸುತ್ತವೆ. ಬಾಲಸುಬ್ರಹ್ಮಣ್ಯರು ಸಿಂಗರ್‌ನ ಇನ್ನೂ ಶ್ರೇಷ್ಠವಾದ ಕತೆಗಳನ್ನು ಇನ್ನೂ ಹೆಚ್ಚು ಸಮರ್ಪಕವಾಗಿ ಅನುವಾದಿಸಿ ಕನ್ನಡಿಗರಿಗೆ ಈ ವಿಖ್ಯಾತ ಕತೆಗಾರನ ಪರಿಚಯ ಇನ್ನಷ್ಟು ಪರಿಣಾಮಕಾರಿಯಾಗಿ ಆಗುವಂತೆ ಮಾಡಲೆಂದು ಹಾರೈಸುತ್ತೇನೆ.

—ಕೆ. ನರಸಿಂಹಮೂರ್ತಿ

# ಪರಿವಿಡಿ

1. ಯಾಂಡಾ / 1

2. ಜಡೆಬಿಲ್ಲೆ / 17

3. ಒಂದು ಸೂಜಿಯ ಕತೆ / 35

4. ಕಟುಕ / 49

5. ಒಂದು ಗಿಳಿಯ ಕತೆ / 67

6. ಉಪನ್ಯಾಸ / 95

# ಯಾಂಡಾ

ಗ್ರೀಕ್ ಸಂಪ್ರದಾಯದ ಹಳೆಯ ಚರ್ಚ್ ಹಾಗೂ ಅದಕ್ಕೆ ಹೊಂದಿಕೊಂಡಂತಿದ್ದ ಸ್ಮಶಾನಕ್ಕೆ ತೀರಾ ಸಮೀಪದ ಬದಿಯ ರಸ್ತೆಯಲ್ಲೇ 'ನವಿಲುಗರಿ' ಇತ್ತು. ಎರಡಂತಸ್ತಿನ ಆ ಇಟ್ಟಿಗೆಯ ಕಟ್ಟಡದ ಚಾವಣಿ ಮಳೆ ಗಾಳಿಗಳ ಹೊಡೆತಕ್ಕೆ ಸಿಕ್ಕಿ ಕುಸಿಯುವಂತಿತ್ತು. ಮುಂಭಾಗದ ಪ್ರವೇಶ ದ್ವಾರದ ಮೇಲೆ ಚಿನ್ನದ ಬಣ್ಣದ ಮಾಸಿದ ಗರಿಯುಳ್ಳ ನವಿಲಿನ ಚಿತ್ರ ಕೆತ್ತಿತ್ತು. ಹೋಟೆಲಿನ ಮುಂಭಾಗದ ಕಿಟಕಿಯಿಲ್ಲದ ಕೊಠಡಿ ಮದ್ಯದಂಗಡಿಯಾಗಿದ್ದು ಮಟಮಟ ಮಧ್ಯಾಹ್ನದಲ್ಲೂ ಅಲ್ಲಿ ಸಂಜೆಗತ್ತಲು ಕವಿದಂತಿತ್ತು. ಉಳಿದ ದಿನಗಳಲ್ಲಿರಲಿ, ಸಂತೆಯ ದಿನಗಳಲ್ಲೂ ಸಹ ರೈತಜನ ಅಲ್ಲಿಗೆ ಬರುವಂತಿರಲಿಲ್ಲ. ಹೋಟೆಲ್ ಮಾಲೀಕ, ಶಾಲಂ ಬಿಂಚೋವರನಿಗೆ ಅವರ ಕುಣಿತ, ಗದ್ದಲ, ಕಿರುಚಾಟಗಳನ್ನು ಸಹಿಸುವ ತಾಳ್ಮೆ ಇರಲಿಲ್ಲ. ಆತನಿಗಾಗಲೀ ಅಥವಾ ಆತನ ಹೆಂಡತಿ ಶೇಂಡಲ್‌ಗಾಗಲೀ ಈ ಒರಟು ಜನಗಳೊಂದಿಗೆ ವ್ಯವಹರಿಸುವ, ಅವರು ಕುಡಿದು ಬಿದ್ದಲ್ಲಿ ಅವರನ್ನು ಎತ್ತಿ ಆಚೆಗೆ ಒಗೆಯುವ ಶಕ್ತಿಯಿರಲಿಲ್ಲ. 'ನವಿಲುಗರಿ' ರಷ್ಯಾ ಆಸ್ಟ್ರಿಯಾ ಗಡಿ ಪ್ರಾಂತ್ಯಕ್ಕೆ ಹೋಗುವ ಮಿಲಿಟರಿ ಮಂದಿಗೆ, ವ್ಯವಸಾಯದ ಉಪಕರಣಗಳನ್ನು ಮಾರಲು ರಷ್ಯಾದಿಂದ ಈ ಪಟ್ಟಣಕ್ಕೆ ಬರುವ ವ್ಯಾಪಾರಸ್ಥರಿಗೆ. ಆಗಾಗ್ಗೆ ಈ ಊರಿಗೆ ಬರುವ ಜಮೀನುದಾರರಿಗೆ ಒಂದು ರೀತಿಯ 'ತಂಗುದಾಣ'ವಾಗಿತ್ತು. ಯಾವಾಗಲೂ ಅಲ್ಲಿ 'ಅತಿಥಿ'ಗಳಿಗೆ ಕೊರತೆಯಿರಲಿಲ್ಲ. ಆಗೊಮ್ಮೆ ಈಗೊಮ್ಮೆ ಬಯಲು ನಾಟಕ ತಂಡದ ನಟರೂ

ರಾತ್ರಿಯನ್ನು ಇಲ್ಲಿ ಕಳೆಯುತ್ತಿದ್ದುದುಂಟು. ಒಮ್ಮೊಮ್ಮೆ ಜಾದೂಗಾರ ಅಥವಾ ಕರಡಿಯಾಡಿಸುವವ–ಇಂಥವರೂ ಅಲ್ಲಿಗೆ ಬರುತ್ತಿದ್ದರು. ಕೆಲವೊಮ್ಮೆ ಪ್ರವಾದಿಗಳೂ–ಅವರು ಯಾಕೆ ಅಲ್ಲಿಗೆ ಬರುತ್ತಿದ್ದರೋ ದೇವರೇ ಬಲ್ಲ–ಬರುತ್ತಿದ್ದರು. ಎಂತಹ ಜನರನ್ನು 'ನವಿಲುಗರಿ'ಗೆ ಕರೆದುಕೊಂಡು ಬರಬೇಕೆಂದು ಆ ಊರಿನ ಗಾಡಿಕಾರನಿಗೆ ತುಂಬ ಚೆನ್ನಾಗಿ ಗೊತ್ತಿತ್ತು.

ಅಪರಿಚಿತನಾಗಿ ಊರಿಗೆ ಬಂದು, ಹೋಟೆಲನ್ನು ಕೊಂಡು, ಹೆಂಡತಿ ಶೇಂಡಲ್‌ಳೊಡನೆ ಇಲ್ಲಿಯೇ ನೆಲೆನಿಂತ ಶಾಲಂ ಪಿಂಚೋವರ್ ತಾನು ಬರುವಾಗಲೇ ತನ್ನ ಜೊತೆ 'ಯಾಂಡಾ' ಎಂಬ ಒಕ್ಕಲು ಹೆಣ್ಣನ್ನು ಕರೆದುಕೊಂಡು ಬಂದಿದ್ದನು. ಮುಖದಲ್ಲಿ ಜಾಲರಿಯಂತಿದ್ದ ಸಿಡುಬು ಕಲೆಗಳನ್ನು ಮರೆತರೆ ಯಾಂಡಾ ಚೆಲುವೆಯೇ ಅನ್ನಬೇಕು; ಕಪ್ಪು ಕೂದಲ ಉದ್ದ ಜಡೆ, ಎಸಳಾದ ಮೂಗು, ಕೆಂಪು ಕೆನ್ನೆ, ಚೆರ್ರಿಯಂತಹ ಕಪ್ಪು ಕಣ್ಣುಗಳು, ಉಬ್ಬಿದ ಎದೆ, ಗೌರವರ್ಣ, ತೆಳುವಾದ ಸೊಂಟ ಹಾಗೂ ತುಂಬು ನಿತಂಬಗಳುಳ್ಳ ಯಾಂಡಾ ದೃಢಕಾಯಳಾಗಿದ್ದಳು. ಹೋಟೆಲಿನ ಎಲ್ಲ ಕೆಲಸಗಳನ್ನೂ ಆಕೆಯೇ ಮಾಡುತ್ತಿದ್ದಳು. ಹಾಸಿಗೆ ಸರಿಪಡಿಸುವುದು, ಮೇಲುಹೊದಿಕೆ ಒಗೆಯುವುದು, ಅಡಿಗೆ ಪಾತ್ರೆ ತೊಳೆಯುವುದು–ಜೊತೆಗೆ ಪುರುಷ ಅತಿಥಿಗಳು ಬಯಸಿದಾಗ ಅವರಲ್ಲಿಗೆ ಹೋಗುವುದು, ಹೀಗೆ.... ಪ್ರವಾಸಿಗರು ಬಂದು ಹೋಟೆಲಿನಲ್ಲಿ ಹೆಸರನ್ನು ನೊಂದಾಯಿಸುವಾಗಲೇ ಶಾಲಂ ಪಿಂಚೋವರ್ ಕಣ್ಣು ಮಿಟುಕಿಸಿ, ತುಂಟನಗೆ ನಕ್ಕು ಸೂಚ್ಯವಾಗಿ ಕೇಳುತ್ತಿದ್ದ: 'ಜೊತೆಗೋ ಅಥವಾ ಹಾಗೆಯೋ?' ಪ್ರವಾಸಿಗರು ಇದನ್ನು ಅರ್ಥಮಾಡಿಕೊಂಡು ಸಾಮಾನ್ಯವಾಗಿ 'ಜೊತೆಗೆ' ಎಂದೇ ಹೇಳುತ್ತಿದ್ದರು. ಶಾಲಂ ಆ ಹಣವನ್ನೂ ಬಿಲ್ ಜೊತೆಗೇ ಸೇರಿಸುತ್ತಿದ್ದ.

ಯಾಂಡಾಳೊಡನೆ ತಿರುಗಾಡಲು ಹೋಗಲು, ಪಾನೀಯ ಸೇವಿಸಲು ಬಯಸುವ ಅತಿಥಿಗಳೂ ಇರುತ್ತಿದ್ದರು. ಆದರೆ ಯಾಂಡಾ ಎಂದೂ ಅದಕ್ಕೆ ಒಪ್ಪುತ್ತಿರಲಿಲ್ಲ. ಯಾಂಡಾ ಕುಡಿಯುವುದನ್ನಾಗಲೀ, ಅಥವಾ ಇತರರೊಡನೆ ಹೆಚ್ಚು ಸಮಯವಿರುವುದನ್ನಾಗಲೀ ಶಾಲಂ ಪಿಂಚೋವರ್ ಇಷ್ಟಪಡುತ್ತಿರಲಿಲ್ಲ. ಯಾಂಡಾ ಪಾನೀಯಗಳನ್ನು ತೆಗೆದುಕೊಳ್ಳುವುದನ್ನು ಆತ ಸಂಪೂರ್ಣ ನಿಷೇಧಿಸಿದ್ದ. ಅವಳೂ ಸಹ ಆತನ ಇಷ್ಟಕ್ಕೆ ವಿರುದ್ಧವಾಗಿ ನಡೆಯುತ್ತಿರಲಿಲ್ಲ. ಎಂತಹ ಬೇಸಿಗೆಯ ದಿನಗಳಲ್ಲೂ ಒಂದು ಗುಟುಕು ಬೀರ್ ಸಹ

ಮುಟ್ಟುತ್ತಿರಲಿಲ್ಲ. ಶಾಲಂ ಅವಳನ್ನು ಕುಡುಕ ತಂದೆಯಿಂದ ಮಾಲತಾಯಿ ಯಿಂದ ಕಾಪಾಡಿ ಕರೆತಂದಿದ್ದ. ಪ್ರತಿಯಾಗಿ ಯಾಂಡಾ ಶಾಲಂನಿಂದ ಒಂದು ಪೈಸೆಯನ್ನೂ ಅಪೇಕ್ಷಿಸದೆ ಅವನಿಗಾಗಿ ದುಡಿಯುತ್ತಿದ್ದಳು. ಕೆಲವು ತಿಂಗಳಿ ಗೊಮ್ಮೆ ಶಾಲಂ ಅವಳ ಸ್ವಂತ ಖರ್ಚಿಗೆಂದು ಹಣ ಕೊಡುತ್ತಿದ್ದುದುಂಟು. ಆಗ ಯಾಂಡಾ ಖುಷಿಯಾಗಿ ಶಾಲಂನ ಕೈಗಳನ್ನು ತುಟಿಗೊತ್ತಿ, ಆತ ಕೊಟ್ಟ ಹಣವನ್ನು ಎಣಿಸದೆಯೇ ಜೋಪಾನವಾಗಿ ಇಟ್ಟುಕೊಳ್ಳುತ್ತಿದ್ದಳು. ಆಗಾಗ್ಗೆ ಅವಳು ಹಣದಿಂದ ತನಗೆ ಬೇಕಾದ ಡ್ರೆಸ್, ಎತ್ತರದ ಹಿಮ್ಮಡಿಯ ಶೂ ಅಥವಾ ಶಾಲು, ಕರವಸ್ತ್ರ, ಬಾಚಣಿಗೆ ಮೊದಲಾದುವನ್ನು ಕೊಳ್ಳುತ್ತಿದ್ದಳು. ಚರ್ಚ್‌ಗೆ ಹೋದಾಗಲಂತೂ ತಪ್ಪದೆ ಗೋಲಕಕ್ಕೆ ಹಣ ಹಾಕುತ್ತಿದ್ದಳು. ಕೆಲವೊಮ್ಮೆ ಅವಳು ಚರ್ಚ್‌ನ ಪಾದ್ರಿಗಾಗಿ ಉಡುಗೊರೆ ತರುತ್ತಿದ್ದಳು ಅಥವಾ ತನ್ನ ಪ್ರೀತಿಯ ಸಂತನ ಎದುರಿಗೆ ಮೇಣದ ಬತ್ತಿ ತಂದು ಹಚ್ಚುತ್ತಿದ್ದಳು. ಚರ್ಚಿನ ಮುದಿ ಹೆಂಗಸು ಯಾಂಡಾಳನ್ನು ಚರ್ಚ್ ಒಳಗೆ ಬರಲು ಬಿಡುತ್ತಿರಲಿಲ್ಲ. ಆದರೆ ಯಾಂಡಾ ಹೇಗೋ ಒಳನುಸುಳುತ್ತಿದ್ದಳು. ಚರ್ಚ್‌ನ ಪಾದ್ರಿ ಚಂದದ ಹೆಂಡತಿಯಿದ್ದೂ, ಯಾಂಡಾಳೊಡನೆ ಸಂಬಂಧ ಹೊಂದಿದ್ದಾನೆಂಬ ಗಾಳಿ ಸುದ್ದಿಯಿದ್ದಿತು.

ಜ್ಯೂಗಳು ಶಾಲಂ ಪೀಟಿಕೋವರ್ ಈ ರೀತಿಯ ವಿಲಾಸಗೃಹವನ್ನು ನಡೆಸುವುದನ್ನು ತೀವ್ರವಾಗಿ ಆಕ್ಷೇಪಿಸುತ್ತಿದ್ದರು. ಶೇಂಡಲ್ ಜೊತೆ ಹೆಂಗಸರು ಜಗಳವಾಡಿದಾಗ, ಯಾಂಡಾಳ ಹೆಸರಿನಿಂದ ಅವಳನ್ನು ಕರೆದು ಬಯ್ಯುತ್ತಿದ್ದರು. ಆದರೆ ಯಾಂಡಾಳಿಲ್ಲದೆ ಅವರ ವ್ಯಾಪಾರ ಸಾಗುವಂತಿರಲಿಲ್ಲ. ಮೂರು ಜನ ಹೆಣ್ಣಾಳುಗಳಿದ್ದರೂ ಸಹ ಯಾಂಡಾಳಷ್ಟು ಕೆಲಸ ಮಾಡುವುದು ಸಾಧ್ಯವಿರಲಿಲ್ಲ. ಜೊತೆಗೆ ಆಳುಗಳಿಗೆ ಕದಿಯುವ ಅಭ್ಯಾಸವಿದ್ದು, ಅವರನ್ನು ಕಾಯಬೇಕಾಗಿತ್ತು. ಶೇಂಡಲ್‌ಗಾಗಲೀ, ಶಾಲಂಗಾಗಲೀ ಈಗ ಸ್ವಲ್ಪವೂ ಆತಂಕವಿರಲಿಲ್ಲ. ಅವರು ಬಿಟ್ಟುಬಂದ ಊರಿನಲ್ಲಿ ಬೆಂಕಿಯ ಅಪಘಾತದಲ್ಲಿ ಸತ್ತ ಒಬ್ಬಳೇ ಮಗಳ ನೆನಪು ಮಾತ್ರ ಆಗಾಗ್ಗೆ ಅವರನ್ನು ಕಾಡುತ್ತಿತ್ತು. ಶೇಂಡಲ್‌ಳಿಗೆ ಅಸ್ತಮಾ: ಶಾಲಂನಿಗೆ ಮೂತ್ರಕೋಶದ ತೊಂದರೆ. ಇಡೀ ಹೋಟೆಲಿನ ಜವಾಬ್ದಾರಿ ಯಾಂಡಾಳದೇ ಆಗಿತ್ತು. ಬೇಸಿಗೆಯ ದಿನಗಳಲ್ಲಿ ಮಧ್ಯರಾತ್ರಿಯ ವೇಳೆಗೇ ಅವಳು ಏಳುತ್ತಿದ್ದಳು. ಚಳಿಗಾಲದಲ್ಲಿ ನಸುಕಿನಲ್ಲಿಯೇ ಎದ್ದು ಕೆಲಸ ಆರಂಭಿಸುತ್ತಿದ್ದಳು. ನೆಲ ಗುಡಿಸಿ

ಸಾರಿಸುವುದು, ಹಾಸಿಗೆ ಹೊದಿಕೆ ಸರಿಪಡಿಸುವುದು, ಬಾವಿಯಿಂದ ನೀರು ಸೇದಿ ತರುವುದು ಮೊದಲಾದ ಕೆಲಸಗಳ ಜೊತೆಗೆ ಸೌದೆ ಸೀಳುವವನು ಬಾರದಿದ್ದಲ್ಲಿ ಅವಳೇ ಸೌದೆಯನ್ನೂ ಸೀಳುತ್ತಿದ್ದಳು. ಒಂದಲ್ಲ ಒಂದು ಕೆಲಸದ ಒತ್ತಡದಿಂದಾಗಿಯೇ ಯಾಂಡಾ ಸಾಯುತ್ತಾಳೆಂದು ಶೇಂಡಲ್‌ಗೆ ಗೊತ್ತಿತ್ತು. ಯಾಂಡಾಳಿಗೆ ಅಂಟು ರೋಗ ಬರಬಹುದೆಂಬ ಆತಂಕವೂ ಆ ಗಂಡ ಹೆಂಡತಿಯರಿಗಿತ್ತು. ಆದರೆ ಯಾವುದೋ ಶಕ್ತಿ ಯಾಂಡಾಳನ್ನು ರಕ್ಷಿಸುತ್ತಿತ್ತು. ಅನೇಕ ವರ್ಷಗಳಿಂದ ಅವಳಿಗೆ ಸಾಮಾನ್ಯ ನೆಗಡಿ ಸಹ ಬಂದಿರಲಿಲ್ಲ. ಶಾಲಂ ಅವಳ ಊಟ ತಿಂಡಿಯ ಬಗ್ಗೆ ನಿರ್ಬಂಧ ವಿಧಿಸಿರಲಿಲ್ಲವಾದರೂ ಅವಳೇ ಹೋಟೇಲಿನಲ್ಲಿ ಅಳಿದುಳಿದ ಮಾಂಸದ ತುಣುಕುಗಳನ್ನೂ ಒಣಗಿದ ಬ್ರೆಡ್, ತಂಗಳು ಸಾರು ಮೊದಲಾದುವನ್ನೂ ತಿನ್ನುತ್ತಿದ್ದಳು. ಶಾಲಂ ಹಾಗೂ ಶೇಂಡಲ್ ಇಬ್ಬರಿಗೂ ಅಸಾಧ್ಯ ಹಲ್ಲುನೋವಿತ್ತು. ಆದರೆ ಯಾಂಡಾಳ ಬಾಯ್ತುಂಬ ಹಲ್ಲುಗಳಿದ್ದು, ನಾಯಿಹಲ್ಲುಗಳಿಗಿಂತ ಗಟ್ಟಿಯಾಗಿದ್ದುವು. ಅವುಗಳಿಂದ ಅವಳು ಎಂಥ ಗಟ್ಟಿ ಬೀಜಗಳನ್ನಾದರೂ ತಿನ್ನುತ್ತಿದ್ದಳು. ಶೇಂಡಲ್ ಹೇಳುತ್ತಿದ್ದಳು : 'ಅವಳು ಮನುಷ್ಯಳಲ್ಲ. ಅವಳೊಂದು ಮೃಗ.'

ಯಾಂಡಾ ಹಾದುಹೋಗುವಾಗ ಹೆಂಗಸರು ಅವಳತ್ತ ಉಗಿಯುತ್ತಿದ್ದರು. ಗಟ್ಟಿಯಾಗಿ ಶಪಿಸುತ್ತಿದ್ದರು. ಹುಡುಗರು ಅವಳ ಹೆಸರು ಕರೆದು ಛೇಡಿಸಿ ಕಲ್ಲು ಮಣ್ಣುಗಳನ್ನು ಅವಳತ್ತ ತೂರುತ್ತಿದ್ದರು. ಬೀದಿಯಲ್ಲಿ ಯಾಂಡಾ ಸಿಕ್ಕಿದಾಗ ಹುಡುಗಿಯರು ಕಣ್ಣು ಮಿಟುಕಿಸಿ ನಕ್ಕು ಕೆಂಪಾಗುತ್ತಿದ್ದರು. ಒಂದಕ್ಕಿಂತ ಹೆಚ್ಚು ಬಾರಿ ಪೋಲೀಸರು ಯಾಂಡಾಳನ್ನು ಠಾಣೆಗೆ ಕರೆಸಿ ಪ್ರಶ್ನಿಸಿದ್ದರು. ಈ ಎಲ್ಲದರ ನಡುವೆಯೂ ಯಾಂಡಾ ಶಾಲಂ ಪಿಂಚೋವರನಿಗಾಗಿ ನಿರಂತರ ದುಡಿಯುತ್ತಿದ್ದಳು. ಕಾಲ ಕಳೆದಂತೆ ಹೋಟೇಲಿಗೆ ಬರುವ ಪ್ರವಾಸಿಗರು ಬದಲಾದರು. ಆ ಪಟ್ಟಣ ರಷ್ಯಾಕ್ಕೆ ಸೇರಿರುವವರೆಗೆ, ಹೋಟೇಲಿನ ಅತಿಥಿಗಳು ಬಹುಪಾಲು ರಷ್ಯನ್ನರಾಗಿದ್ದರು. ನಂತರ ಪಟ್ಟಣ ಆಸ್ಟ್ರಿಯನ್ನರ ವಶವಾದಾಗ ಜರ್ಮನ್ನರು, ಜೆಕೋಸ್ಲೋವಿಯನ್ನರು, ಬಾಸ್ನಿಯನ್ನರು ಬರುತ್ತಿದ್ದರು. ಪೋಲೆಂಡ್ ಸ್ವತಂತ್ರವಾದ ಮೇಲೆ ವಾರ್ಸಾ ಹಾಗೂ ಲುಬ್ಲಿನ್‌ನಿಂದ ಬರುವ ಪೋಲಿಷರು ಅಲ್ಲಿನ ಅತಿಥಿಗಳಾಗಿರುತ್ತಿದ್ದರು. ಈ ನಡುವೆ ನಗರ ಏನೆಲ್ಲ ಕಂಡಿತು! ವಿಷಮಶೀತಜ್ವರ, ವಾಂತಿ ಭೇದಿ ಕೆಲವು ಕಾಲ ನಗರವನ್ನು

ಬಾಧಿಸಿತು. ಆಸ್ಟ್ರಿಯನ್ ಸೈನಿಕರು ತಂದ ಕಾಲರಾ ಆರುನೂರಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡಿತು. ಬಾಲ್ಷೆವಿಕ್ ಆಡಳಿತದಲ್ಲಿ ಕೆಲವು ಕಾಲ ಹೋಟೆಲ್ ಕಮ್ಯೂನಿಸ್ಟ್ ಪಾರ್ಟಿ ಸಮಿತಿಯ ಆಡಳಿತಕ್ಕೆ ಒಳಗಾಗಿದ್ದು, ಆಡಳಿತಾಧಿಕಾರಿಯೊಬ್ಬ ಅದನ್ನು ನೋಡಿಕೊಳ್ಳುತ್ತಿದ್ದ. ಯಾಂಡಾ ಮಾತ್ರ ಅಲ್ಲಿಯೇ ಉಳಿದಿದ್ದಳು. ಪಾತ್ರೆ ತೊಳೆಯುವುದು, ನೆಲ ಗುಡಿಸಿ ಸಾರಿಸುವುದು. ಅತಿಥಿಗಳಿಗೆ ವೋಡ್ಕಾ, ಬೀರ್ ಇತ್ಯಾದಿ ತೆಗೆದುಕೊಂಡು ಹೋಗಿ ಕೊಡುವುದು ಮೊದಲಾದ ಕೆಲಸಗಳನ್ನು ಯಾರಾದರೂ ಮಾಡಲೇಬೇಕಿತ್ತಲ್ಲ? ಅತಿಥಿಗಳ ಸ್ಥಾನ ಪದವಿಗಳೇನೇ ಇರಲಿ, ರಾತ್ರಿಯಲ್ಲಿ ಮಾತ್ರ ಎಲ್ಲರೂ ಯಾಂಡಾಳನ್ನು ತಮ್ಮ ಹಾಸಿಗೆಯಲ್ಲಿ ಬಯಸುತ್ತಿದ್ದರು. ಅವರಲ್ಲಿ ಕೆಲವರು ಅವಳನ್ನು ಮುದ್ದಿಸಿದರೆ, ಹೊಡೆದು ಹಿಂಸಿಸುವವರೂ ಇದ್ದರು. ಅವಳೊಬ್ಬಳು ದೇವತೆಯೆಂಬಂತೆ ಕೆಲವರು ಅವಳ ಮುಂದೆ ಪಶ್ಚಾತ್ತಾಪ ಪಡುತ್ತಿದ್ದರು. ಒಬ್ಬ ಸೈನಿಕ ಅಧಿಕಾರಿ ಅವಳ ತಲೆಯ ಮೇಲೆ ಫ್ರೆಂಚ್ ಪಾನೀಯದ ಲೋಟವನ್ನಿಟ್ಟು ತನ್ನ ಗುರಿ ಪರೀಕ್ಷಿಸಿದ್ದ. ಮತ್ತೊಬ್ಬನಂತೂ ಅವಳ ತೋಳುಗಳನ್ನು ಕಚ್ಚಿ ಜಿಗಣೆಯಂತೆ ರಕ್ತ ಹೀರಿದ್ದ. ಇಷ್ಟಾದರೂ ಯಾಂಡಾ ಬೆಳಿಗ್ಗೆ ಬೇಗ ಎದ್ದು, ಸ್ನಾನ ಮುಗಿಸಿ, ತಲೆ ಬಾಚಿಕೊಂಡು ಹೊಸಬಳೆಂಬಂತೆ ತನ್ನ ಕೆಲಸ ಪ್ರಾರಂಭಿಸುತ್ತಿದ್ದಳು. ನೆಲ ಸೀಳುಬಿಟ್ಟು ಅಲ್ಲಲ್ಲಿ ತೂತುಗಳಿದ್ದವು, ಗೋಡೆಗಳು ಬಿರುಕು ಬಿಟ್ಟಿದ್ದುವು. ಹೊಲಸೆಂಬುದಕ್ಕೆ ಕಡೆಯೇ ಇರಲಿಲ್ಲ. ಯಾಂಡಾ ಎಷ್ಟು ಸಾರಿ ಶುಚಿ ಮಾಡಿದರೂ, ಕ್ರಿಮಿನಾಶಕ ಸಿಂಪಡಿಸಿ ತೊಳೆದರೂ ತಿಗಣೆಗಳು ಇರುವೆಗಳು ಇಮ್ಮಡಿಯಾಗುತ್ತಿದ್ದವೇ ಹೊರತು ಕಡಿಮೆಯಾಗಲಿಲ್ಲ. ಹೋಟೇಲ್ ಯಾವಾಗಲಾದರೂ ಬೀಳಬಹುದೆಂಬ ಅಪಾಯಸ್ಥಿತಿ ಪ್ರತಿದಿನವೂ ಇರುತ್ತಿತ್ತು. ಇದ್ದುದರಲ್ಲಿ ಯಾಂಡಾ ಅದನ್ನು ರಿಪೇರಿ ಮಾಡುತ್ತಾ ಉಳಿಸಿದ್ದಳು.

ಹೋಟೇಲ್‌ನ ಮಾಲೀಕರೂ ಸಹ ಹೋಟೇಲಿನಷ್ಟೇ ಹೋಲುತ್ತಿದ್ದರು. ಶೇಂಡಲ್‌ಳ ನಡುಬಾಗಿ ಮುಖ ಸುಕ್ಕುಗಟ್ಟಿ ಕಳೆ ಕಳೆದುಕೊಂಡಿತ್ತು. ಅವಳ ಮಾತು ಸ್ಪಷ್ಟವಿರಲಿಲ್ಲ. ನಡೆಯಲಾಗದೆ ತೆವಳುತ್ತಿದ್ದಳು. ಟ್ರಂಕಿನಲ್ಲಿದ್ದ ಹಳೆಯ ಹರಿದ ನಿಲುವಂಗಿಯೊಂದನ್ನು ತೆಗೆದು ಅದಕ್ಕೆ ತೇಪೆ ಹಾಕುತ್ತಾ ಕುಳಿತಿರುತ್ತಿದ್ದಳು. ಕಾಲಂ ಬೇಡವೆಂದು ಎಷ್ಟೇ ಹೇಳಿದರೂ ಅವಳು ಕೇಳುತ್ತಿರಲಿಲ್ಲ. ಮೂಗಿನ ತುದಿಯಲ್ಲಿ ಕನ್ನಡಕ ಸಿಕ್ಕಿಸಿಕೊಂಡು ದಿನವಿಡೀ ನಿಲುವಂಗಿ ಹೊಲಿಯು

ತ್ತಿದ್ದಳು. ಸೂಜಿಗೆ ದಾರ ಪೋಣಿಸಿಕೊಡಲು ಮತ್ತೆ ಮತ್ತೆ ಯಾಂಡಾಳನ್ನು ಕರೆಯುತ್ತಿದ್ದು, 'ಇದು ದಾರವಲ್ಲ, ಜೇಡರ ಬಲೆ: ಈ ಸೂಜಿಗಳಿಗೆ ಕಣ್ಣುಗಳಿದ್ದರೆ ತಾನೇ ?' ಎಂದು ಗೊಣಗುತ್ತಿದ್ದಳು.

ಶಾಲಂ ಪಿಂಚೋವರನ ಮುಖ ಮುಪ್ಪಿನಿಂದ ಹೊಸ ಆಕೃತಿ ಪಡೆಯಿತು. ಹುಬ್ಬುಗಳು ಜೋತುಬಿದ್ದುವು. ಕಣ್ಣ ರೆಪ್ಪೆಯ ಕೆಳಗೆ ಸುಕ್ಕುಗಳು ಜಾಸ್ತಿಯಾದುವು. ಕಪ್ಪು ಆವರಿಸಿದ ಸುಕ್ಕುಗಳ ನಡುವೆ ಕಣ್ಣೀರು ಒರೆಸುವುದೂ ಸಾಧ್ಯವಿರಲಿಲ್ಲ. ತಲೆ ಅತ್ತಿಂದಿತ್ತ ಸದಾ ಅಲುಗಾಡುತ್ತಿತ್ತು. ಇಷ್ಟಾದರೂ ಶಾಲಂ ಅತಿಥಿಗಳು ಬಂದಾಗ ಹೋಟೇಲಿನ ಕೌಂಟರಿನ ಬಳಿ ಬಂದು ನಡುಗುವ ಕೈಗಳಿಂದ ರಿಜಿಸ್ಟರ್ ತೆಗೆದು ಕೇಳುತ್ತಿದ್ದ : 'ಜೊತೆಗೋ ಅಥವಾ ಹಾಗೆಯೋ ?'

ಅತಿಥಿಗಳು ಬಹುಪಾಲು ತಪ್ಪದೆ ಹೇಳುತ್ತಿದ್ದರು : 'ಜೊತೆಗೆ'

## ೨

ಎಲ್ಲ ಘಟನೆಗಳೂ ಕ್ಷಿಪ್ರಗತಿಯಲ್ಲಿ ನಡೆದುಹೋದವು. ಮೊದಲು ಶೇಂಡಲ್ ಅಸ್ವಸ್ಥಳಾಗಿ ಹಾಸಿಗೆ ಹಿಡಿದು, ಕೊನೆಯುಸಿರೆಳೆದಳು. ರೋಶ್ ಹಸನತ್‌ನ ಮೊದಲ ದಿನ ಅವಳು ಸತ್ತಳು, ಮಾರನೆಯ ದಿನ ಶುದ್ಧಿಯ ದಿನವೆಂದು ಹರಿದ ಬಟ್ಟೆ ಹೊಲಿಯುವಂತಿರಲಿಲ್ಲ. ನಂತರದಲ್ಲಿ ನಗರದ ಅತ್ಯಂತ ವೃದ್ಧೆಯಾಗಿದ್ದ ಆ ಹೆಂಗಸು ಎಂದೂ ತನ್ನ ನಿಲುವಂಗಿ ಹೊಲಿಯಲೇ ಇಲ್ಲ. ಸ್ಮಶಾನದ ಕೆಲಸಗಾರರು ಅವಳ ಸಂಸ್ಕಾರವನ್ನು ಉತ್ಸಾಹದಿಂದ ಮಾಡಿದರು. ಶಾಲಂ ದುಃಖದ ಭರದಲ್ಲಿ ಕ್ಯಾಡಿಷ್ ಗ್ರಂಥದ ಸಾಲುಗಳನ್ನೇ ಮರೆತನು. ಯಾರೋ ಮಧ್ಯೆ ಹೇಳಿಕೊಡಬೇಕಾಯಿತು. ಸ್ಮಶಾನದಲ್ಲಿ ಅವನನ್ನು ನೋಡಿದವರು 'ಅವನ ಕಾಲುಗಳು ನಡುಗುತ್ತಿದ್ದವು, ಅಲ್ಲೇ ಕುಸಿದು ಬೀಳುವಂತಿದ್ದ' ಎನ್ನುತ್ತಿದ್ದರು. ಶೇಂಡಲಳ ಸಾವಿನ ನಂತರ ಶಾಲಂ ತೀರ ಮಂಕಾದ. ಗಲ್ಲಾ ಪೆಟ್ಟಿಗೆಯಿಂದ ಹಣ ತೆಗೆದುಕೊಳ್ಳುತ್ತಿದ್ದ. ಆದರೆ ಅದನ್ನು ಏನು ಮಾಡುತ್ತಿದ್ದೇನೆಂಬ ಅರಿವೇ ಅವನಿಗಿರುತ್ತಿರಲಿಲ್ಲ. ಆತನ ಕಿವಿಯ ಬಳಿ ಹೋಗಿ ಕಿರುಚಿದರೂ ಕೇಳಿಸದಷ್ಟು ಕಿವುಡನಾದ. ಟ್ಯಾಬರ್‌ನೆಕಲ್ಸ್ ಹಬ್ಬಕ್ಕೆ ಹಿಂದಿನ

ದಿನ ಅಸಾಧ್ಯ ಮಳೆ ಬಂತು. ಆ ಊರಿನ ಅತ್ಯಂತ ಹಿರಿಯರಿಗೂ ಸಹ ಇದು ವರೆಗೆ ಅಂತಹ ಮಳೆಯನ್ನು ಕಂಡ ನೆನಪಿರಲಿಲ್ಲ. ಹಳ್ಳಗಳೆಲ್ಲ ತುಂಬಿ ಹರಿದುವು. ನದಿಯ ಮಧ್ಯದ ತಿರುಗಣಿ ಚಕ್ರವನ್ನೂ ಸಹ ಅನಿವಾರ್ಯವಾಗಿ ನಿಲ್ಲಿಸಬೇಕಾ ಯಿತು. ಹೋಟೆಲಿನ ಚಾವಣಿ ಸೋರುತ್ತಿತ್ತು. ಮಹಡಿಯ ಮೇಲಿದ್ದ ಅತಿಥಿಗಳು ಮಧ್ಯರಾತ್ರಿಯಲ್ಲಿ ಕೆಳಗಿಳಿದು ಬಂದು ಮೇಲೆ ಮಲಗಲು ಸಾಧ್ಯವಿಲ್ಲ ವೆಂದು ದೂರಿದರು. ಶಾಲಂ ತನ್ನ ರೂಮಿನಲ್ಲಿ ತಾನೇ ಅಸಹಾಯಕನಾಗಿದ್ದನು. ಆಗ ಯಾಂಡಾ ಅತಿಥಿಗಳ ಕ್ಷಮೆ ಕೇಳಿ, ಕೆಳಗಿನ ಕೊಠಡಿಗಳಲ್ಲಿ ಅವರು ಮಲಗಲು ವ್ಯವಸ್ಥೆ ಮಾಡಿದಳು. ಚಾವಣಿಯ ಮೇಲೆ ಹತ್ತಿ ಸೋರುವುದನ್ನು ನಿಲ್ಲಿಸಲು ಪ್ರಯತ್ನಿಸಿದಳು. ಆದರೆ ಚಾವಣಿ ಮುಟ್ಟಿದರೇ ಕುಸಿಯುವಂತಿತ್ತು. ವಾರನೆಯ ದಿನ ಅತಿಥಿಗಳು ಬಿಲ್‌ನ ಹಣವನ್ನೂ ಕೊಡದೆ ಹಾಗೇ ಹೋದರು. ಶನಿವಾರ ಬೆಳಿಗ್ಗೆ ಶಾಲಂ ಪಿಂಚೋವರ್ ತನ್ನ ಪ್ರಾರ್ಥನೆಯ ಶಾಲನ್ನು ತೆಗೆದುಕೊಂಡು, ಇನ್ನೇನು ಪ್ರಾರ್ಥನಾ ಮಂದಿರಕ್ಕೆ ಹೊರಡಬೇಕೆನ್ನುವಾಗ ಇದ್ದಕ್ಕಿದ್ದಂತೆ ಕುಸಿದುಬಿದ್ದನು. 'ಯಾಂಡಾ ನನ್ನ ಕತೆ ಮುಗಿಯಿತು' ಎಂದು ಕಿರುಚಿದನು. ಯಾಂಡಾ ಸ್ವಲ್ಪ ಬ್ರಾಂದಿಯನ್ನು ತರಲು ಓಡಿದಳು. ಆದರೆ ಸಮಯ ಮಿಂಚಿತ್ತು. ಶಾಲಂನ ಕೈಕಾಲುಗಳು ಸೆಟೆದು, ಆತ ಸತ್ತನು. ಪಟ್ಟಣದ ತುಂಬ ಸುದ್ದಿ ಹಬ್ಬಿತು. ಶಾಲಂಗೆ ಮಕ್ಕಳಿರಲಿಲ್ಲ. ಒಳ್ಳೆಯತನದಲ್ಲಿ ನಂಬಿಕೆಯಿಲ್ಲದ, ಕೃತಜ್ಞತೆಯಿಲ್ಲದ ಜನಗಳು ಉಯಿಲಿಗಾಗಿ ಆತನ ಪೆಟ್ಟಿಗೆಗಳನ್ನೆಲ್ಲಾ ಹುಡುಕಿದರು. ಪುರಸಭೆಯ ಅಧಿಕಾರಿಗಳು ಆತನಿಗೆ ಸಂಬಂಧಪಟ್ಟ ಎಲ್ಲ ವಸ್ತುಗಳನ್ನೂ ಪಟ್ಟಿ ಮಾಡಿ, ಆತನ ಹಣದ ಪೆಟ್ಟಿಗೆಗೆ ಬೀಗಮುದ್ರೆಯೊತ್ತಿದರು. ಯಾಂಡಾ, ಶಾಲಂ ಕುಸಿದು ಬಿದ್ದಾಗ ಅಳಲು ಆರಂಭಿಸಿದವಳು ಆತನ ಸಂಸ್ಕಾರ ಮುಗಿಯುವರೆಗೂ ಅಳು ನಿಲ್ಲಿಸಲಿಲ್ಲ. ಅವಳು ಶಾಲಂ ಹೋಟೆಲಿನಲ್ಲಿ ಇಪ್ಪತ್ತು ವರುಷಗಳಿಗೂ ಮಿಕ್ಕಿ ದುಡಿದಿದ್ದಳು. ಈಗ ಅವಳ ಬಳಿ ಕೇವಲ ಕೆಲವೇ ಕೆಲವು ನಾಣ್ಯಗಳು ಮಾತ್ರ ಉಳಿದಿದ್ದುವು. ಅಧಿಕಾರಿಗಳು ಆ ತಕ್ಷಣ ಯಾಂಡಾ ಹೋಟೆಲಿನಿಂದ ಹೊರಹೋಗಬೇಕೆಂದು ಅಪ್ಪಣೆ ಮಾಡಿದರು. ಯಾಂಡಾ ತನ್ನ ವಸ್ತುಗಳನ್ನೆಲ್ಲಾ ಒಂದು ಚೀಲದಲ್ಲಿ ತುಂಬಿಕೊಂಡು, ಸಾಮಾನ್ಯವಾಗಿ ಚರ್ಚ್‌ಗೆ ಹೋಗುತ್ತಿದ್ದಾಗ ಹಾಕಿಕೊಳ್ಳುತ್ತಿದ್ದ ಬೂಗಳನ್ನು ಹಾಕಿಕೊಂಡು, ಶಾಲಿನಲ್ಲಿ ತನ್ನನ್ನು ಸುತ್ತಿ ಕೊಂಡು ರೈಲ್ವೆ ನಿಲ್ದಾಣದತ್ತ ಹೆಜ್ಜೆ ಹಾಕಿದಳು. ಅವಳನ್ನು ಬೀಳ್ಕೊಡುವವರು

ಯಾರೂ ಇರಲಿಲ್ಲ. ನಿಲ್ದಾಣದಲ್ಲಿ ಅವಳು ಟಿಕೇಟ್ ಕೌಂಟರಿನ ಬಳಿ ಹೋಗಿ ಕೇಳಿದಳು : 'ದಯವಿಟ್ಟು ಸ್ಕಿಬಿಕಾಗೆ ಒಂದು ಟಿಕೆಟ್ ಕೊಡಿ'

'ಅಂಥ ಯಾವುದೇ ಸ್ಟೇಷನ್ ಇಲ್ಲ.'

ಯಾಂಡಾ ಅಳಲು ಪ್ರಾರಂಭಿಸಿದಳು : 'ನಾನು ಅನಾಥೆ, ನಾನೀಗ ಏನು ಮಾಡಲಿ ?' ನಿಲ್ದಾಣದಲ್ಲಿ ರೈತರು ಅವಳನ್ನು ದಿಟ್ಟಿಸಿ ನೋಡಿದರು. ಹೆಂಗಸರು ಅವಳತ್ತ ಉಗಿದರು. ಜ್ಯೂ ಸೇಲ್ಸ್‌ಮನ್ ಒಬ್ಬ ಯಾಂಡಾಳನ್ನು ವಿಚಾರಿಸಿ ಸ್ಕಿಬಿಕಾ ಬಗ್ಗೆ ಕೇಳತೊಡಗಿದ. ಅದು ಪಟ್ಟಣವೋ ಹಳ್ಳಿಯೋ ? ಯಾವ ದೇಶ ಅಥವಾ ರಾಜ್ಯ ಅಥವಾ ಜಿಲ್ಲೆಯಲ್ಲಿದೆ ? ಮೊದಮೊದಲು ಯಾಂಡಾಗೆ ಏನೂ ನೆನಪಿಗೆ ಬರಲಿಲ್ಲ. ಆದರೆ ಹರಿದ ಕೋಟಿನ, ಕುರಿ ತುಪ್ಪಟದ ಟೋಪಿಯ ಆ ಸೇಲ್ಸ್‌ಮನ್ ಅವಳನ್ನು ಏಬಿಡದೆ ಪ್ರಶ್ನಿಸುತ್ತಲೇ ಇದ್ದ. ಕಡೆಗೆ ಸ್ಕಿಬಿಕಾ ಎಂಬ ಹಳ್ಳಿ ಕೆಲ್ಸಿಯ ಸಮೀಪದಲ್ಲಿ ಸೋಬ್ಲೋ ಹಾಗೂ ಜಿಕಿನ್ ನಡುವೆ ಎಲ್ಲೋ ಇದೆಯೆಂದು ಸೂಚನೆ ಸಿಕ್ಕಿತು. ಯಾಂಡಾ ಕರವಸ್ತ್ರದಲ್ಲಿ ಸುತ್ತಿಟ್ಟಿದ್ದ ಹಣವನ್ನು ತೆಗೆಸಿ, ಅವುಗಳನ್ನು ಎಣಿಸಲು ಸೇಲ್ಸ್‌ಮನ್ ಸಹಾಯ ಮಾಡಿದ. ಟಿಕೆಟ್ ಕೌಂಟರಿನ ಬಳಿ ಹೋಗಿ ಟಿಕೆಟ್ ನೀಡುವವನೊಡನೆ ಈ ಬಗ್ಗೆ ಮಾತನಾಡಿದ. ಆದರೆ ಆ ಪ್ರದೇಶಕ್ಕೆ ನೇರ ರೈಲು ಇರಲಿಲ್ಲ. ಕುದುರೆಯ ಮೇಲೆ ಹೋಗುವುದು ಉತ್ತಮ. ಇಲ್ಲಿಂದ ರಜವಾಡೋ ಅಲ್ಲಿಂದ ಸ್ಯಾಂಡೋಮಿಲ್, ಒಪ್ರೋಲಿ. ಅಲ್ಲಿ ಕುದುರೆಗಾಡಿ ಸಿಗಬಹುದು ಅಥವಾ ಸ್ಕಿಬಿಕಾಗೆ ಅಲ್ಲಿಂದ ನಡೆದೂ ಹೋಗಬಹುದೆಂದು ತಿಳಿಯಿತು.

ಪರಿಚಿತವಾದ ಆ ಹೆಸರುಗಳನ್ನು ಕೇಳಿದ ಮಾತ್ರಕ್ಕೇ ಯಾಂಡಾಳಿಗೆ ದುಃಖ ಉಕ್ಕಿಬಂತು. ಹಿಂದೊಮ್ಮೆ ಸ್ಕಿಬಿಕಾದಲ್ಲಿ ಅವಳಿಗೆ ತಂದೆ, ತಾಯಿ, ತಂಗಿ, ಸಂಬಂಧಿಗಳು–ಎಲ್ಲರೂ ಇದ್ದರು. ಅವಳ ತಾಯಿ ಸತ್ತಳು. ತಾಯಿ ಸತ್ತ ಕೆಲವು ದಿನಗಳಲ್ಲೇ ತಂದೆ ಬೇರೊಬ್ಬಳನ್ನು ಮದುವೆಯಾಗಿದ್ದ. ಯಾಂಡಾಳಿಗೆ ಅಲ್ಲಿನ ರೈತ ಮಗ ವಾಜೆಯಿಕ್‌ನೊಂದಿಗೆ ಇನ್ನೇನು ಮದುವೆ ನಿಶ್ಚಯ ಆಗುವುದರಲ್ಲಿತ್ತು. ಆದರೆ ಅಷ್ಟರಲ್ಲಿ ಅಲ್ಲಿನ ಅಕ್ಕಸಾಲಿಗನ ಮಗಳು ಜೋಕಾ ಅವನನ್ನು ತನ್ನತ್ತ ಸೆಳೆದುಕೊಂಡಿದ್ದಳು. ಇದುವರೆಗೆ ಯಾಂಡಾ, ಶಾಲಂ ಪಿಂಚೋವರನಿಗಾಗಿ ದುಡಿಯುವುದರಲ್ಲಿ ಹಿಂದಿನ ತನ್ನೆಲ್ಲ ಬದುಕನ್ನೂ ಮರೆತಿದ್ದಳು. ಅದೆಲ್ಲ ಅವಳಿಗೆ ಎಲ್ಲೋ ದೂರದಲ್ಲಿ ನಡೆದಂತಿತ್ತು. ಆದರೆ ಈಗ ಅವಳ ಮಾಲೀಕ

ಸತ್ತು, ಬೇರೆ ದಾರಿಯಿಲ್ಲದೆ ಅವಳು ಊರಿಗೆ ಹೊರಟಿದ್ದಳು. ಯಾರಿಗೆ ಗೊತ್ತು ? ಅವಳ ಹತ್ತಿರದವರು ಯಾರಾದರೂ ಈಗಲೂ ಅಲ್ಲಿ ಇರಬಹುದು ; ಕೆಲವರಾದರೂ ಬಹುಶಃ ಅವಳ ಹೆಸರನ್ನು ನೆನಪಿನಲ್ಲಿಟ್ಟುಕೊಂಡಿರಬಹುದು.

ಒಳ್ಳೆಯ ಜನ ಸಹಾಯ ಮಾಡಿದರು. ಉಗಿಸಿಕೊಂಡು ವ್ಯಂಗ್ಯ ನಗೆಯ ಇರಿತಕ್ಕೊಳಗಾಗಿ ಅಪಮಾನದಿಂದ ಬದುಕುತ್ತಿದ್ದ ಆ ಪಟ್ಟಣದಿಂದ ಈಗ ಅವಳು ಬಹು ದೂರವಿದ್ದಳು. ಗಾಡಿಯವನೂ ಅವಳಿಂದ ಹೆಚ್ಚು ಹಣವನ್ನೇನೂ ತೆಗೆದುಕೊಂಡಿರಲಿಲ್ಲ. ಉದ್ದ ಕೂದಲಿನ ಗಡ್ಡಧಾರಿ ಜ್ಯೂಗಳಿಗೆ ಪೋಲೆಂಡಿನ ಎಲ್ಲ ಭಾಗಗಳೂ ಅಂಗೈ ರೇಖೆಗಳಂತೆ ಪರಿಚಯವಿದ್ದಿತು. ಅವರು ಯಾಂಡಾಳಿಗೆ, ಅವಳು ಈಗಾಗಲೇ ಮರೆತಿದ್ದ ಊರುಗಳನ್ನೆಲ್ಲಾ ನೆನಪಿಸಿ, ಹತ್ತಿರದ ದಾರಿ ತಿಳಿಸಿಕೊಟ್ಟರು. ಮಧ್ಯದಂಗಡಿಯಲ್ಲಿ ಒಬ್ಬ ನಕ್ಷೆಯೊಂದನ್ನು ನೋಡಿ ಅವಳಿಗೆ ಇನ್ನೂ ಹತ್ತಿರದ ದಾರಿ ತೋರಿಸಿಕೊಟ್ಟ. ಜನಗಳ ಬುದ್ಧಿವಂತಿಕೆಗೆ ಯಾಂಡಾ ಆಶ್ಚರ್ಯಪಟ್ಟಳು. ಇವರ ತಲೆಯಲ್ಲಿ ಎಷ್ಟೆಲ್ಲ ಜ್ಞಾನವನ್ನು ತುಂಬಿಕೊಂಡಿದ್ದಾರೆ : ಅಸಹಾಯಕ ಹೆಣ್ಣೊಬ್ಬಳಿಗೆ ನೆರವು ನೀಡುವುದರಲ್ಲಿ ಅವರು ತೋರಿಸಿದ ಆಸಕ್ತಿ ಸಹ ಅವಳಿಗೆ ಅಚ್ಚರಿಯುಂಟುಮಾಡಿತು. ಅವರೆಲ್ಲರ ಸಲಹೆ ಕೇಳಿಯೂ ಯಾಂಡಾ, ಕುದುರೆ ಸವಾರಿಗಿಂತ ನಡೆದದ್ದೇ ಹೆಚ್ಚು. ಮಳೆಯಲ್ಲಿ ನೆನೆದಳು; ಮಂಜೂ ಸಾಕಷ್ಟು ಬೀಳುತ್ತಿತ್ತು. ಹಳ್ಳಗಳಂತಿದ್ದ ರಸ್ತೆ ನೀರಿನಲ್ಲಿ ಬಿದ್ದು ಎದ್ದು ನಡೆಯುತ್ತಾ ಮುಂದುವರಿದಳು. ಒಳ್ಳೆಯ ಹಾಸಿಗೆ ದಿಂಬು, ಬೆಚ್ಚನೆಯ ಹೊದಿಕೆಯಲ್ಲಿ ಮಲಗಿ ಅಭ್ಯಾಸವಿದ್ದ ಅವಳು ಈಗ ನೆಲದ ಮೇಲೆ, ಹುಲ್ಲಿನ ಬಣವೆಗಳ ಮಧ್ಯೆ ಅನಿವಾರ್ಯವಾಗಿ ಮಲಗಬೇಕಾಯಿತು. ಅವಳ ಉಡುಪು ಉದ್ದಕ್ಕೂ ಸದಾ ಒದ್ದೆಯಾಗಿಯೇ ಇರುತ್ತಿತು. ತನ್ನ ಬಳಿಯಿದ್ದ ನೋಟುಗಳನ್ನು ಮಾತ್ರ ಅವಳು ಹೇಗೋ ನೆನೆಯದಂತೆ ಸುರಕ್ಷಿತವಾಗಿ ಇರಿಸಿಕೊಂಡಿದ್ದಳು. ದಾರಿ ತುಳಿಯುತ್ತಾ ಯಾಂಡಾ ತನ್ನ ಬದುಕಿನ ಬಗ್ಗೆ ಯೋಚಿಸಿದಳು. ಶಾಲಂ ಪಿಂಚೋವರ್ ಆಗಾಗ್ಗೆ ಅವಳಿಗೆ ಹಣವನ್ನು ಕೊಡುತ್ತಿದ್ದ, ಆದರೆ ಆ ಹಣ ಅವಳ ಬಳಿ ಉಳಿದಿರಲಿಲ್ಲ. ರಷ್ಯನರು ಹಣವನ್ನು ಕೊಪೆಕ್ ರೂಬೆಲ್‌ಗಳಲ್ಲಿ ಎಣಿಸುತ್ತಿದ್ದರು. ಆಸ್ಟ್ರಿಯನ್ನರು ಬಂದಾಗ ರೂಬೆಲ್ ಹೋಗಿ ಕ್ರೋನೆನ್ ಹಾಗೂ ಹೆಲ್ಲೆರ್ ಬಂತು. ಜಾಲ್ಮಪಿಕರು ಜಿರೊಪ್ಸ್ನಿಯಲ್ಲಿ ಎಣಿಸುತ್ತಿದ್ದರು. ಪೋಲೆಂಡಿನವರು ಬಂದಾಗ ಲಾಟಿಸ್ ಬಳಕೆಗೆ ಬಂದಿತು. ಯಾಂಡಾಳಂತಹ

ಸಾಮಾನ್ಯಳಿಗೆ ಈ ಎಲ್ಲ ಬದಲಾವಣೆಗಳು ಹೇಗೆ ಅರ್ಥವಾಗಬೇಕು ? ಈಗ ಅವಳ ಬಳಿ ಏನಾದರೂ ಹಣ ಉಳಿದಿದ್ದರೆ ಅದೊಂದು ಪವಾಡವಷ್ಟೆ.

ಓ ದೇವರೆ ! ಗಂಡಸರು ಇನ್ನೂ ಅವಳನ್ನು ಬೆನ್ನಟ್ಟುತ್ತಿದ್ದರು. ಅವಳು ಎಲ್ಲೇ ಮಲಗಲಿ, ರೈತರು ಬಂದು ಬಳಸಿಕೊಳ್ಳುತ್ತಿದ್ದರು. ರೈಲ್ವೆ ವಾಗನ್‌ನಲ್ಲಿ ನಡುರಾತ್ರಿಯಲ್ಲಿ ಯಾರೋ ಅವಳನ್ನು ಸದ್ದಿಲ್ಲದೆ ಅನುಭವಿಸುತ್ತಿದ್ದರು. 'ಅವರು ನನ್ನಲ್ಲಿ ಏನು ಕಾಣುತ್ತಾರೆ ?' ಎಂದು ಯಾಂಡಾ ಒಮ್ಮೊಮ್ಮೆ ತನ್ನನ್ನೇ ಕೇಳಿ ಕೊಳ್ಳುತ್ತಿದ್ದಳು. ಅವಳಿಗೆ ನೆನಪಿರುವ ಮಟ್ಟಿಗೆ ಯಾಂಡಾ ಯಾರನ್ನೂ ತಿರಸ್ಕರಿಸಿರಲಿಲ್ಲ. ಅವಳ ತಂದೆ ಇವಳ ಈ ಮೃದು ಸ್ವಭಾವಕ್ಕೆ ಎಷ್ಟೋ ಸಾರಿ ಹೊಡೆದಿದ್ದ. ಅವಳ ಮಲತಾಯಿಯಂತೂ, ಕೂದಲು ಕಿತ್ತು ಹಿಂಸಿಸುತ್ತಿದ್ದಳು. ಚಿಕ್ಕ ಹುಡುಗಿಯಾಗಿರುವಾಗಲೇ, ಅವಳ ಜೊತೆಯ ಮಕ್ಕಳು ಯಾಂಡಾಳ ಮುಖಕ್ಕೆ ಮಣ್ಣು ತೂರಿ, ಕೈಗೆ ಪೊರಕೆ ಕೊಟ್ಟು, ಬೀದಿ ಮಾರಿಯ ಪಾತ್ರ ಮಾಡಿಸುತ್ತಿದ್ದರು. ಶಾಲಂ ಹೋಟೇಲಿನಲ್ಲಿಯೂ ಅತಿಥಿಗಳೊಂದಿಗೆ ಅವಳು ಪಡೆದ ಅನುಭವ ಭೀಭತ್ಸವಾಗಿಯೇ ಇತ್ತು. ಅನಾಗರಿಕರಂತೆ ಅವರು ವರ್ತಿಸು ತ್ತಿದ್ದುದನ್ನು ನೆನಪಿಸಿಕೊಂಡು ಅಳಬೇಕೋ ನಗಬೇಕೋ ಅವಳಿಗೇ ಅರ್ಥ ವಾಗುತ್ತಿರಲಿಲ್ಲ. ಆದರೆ ಎಂಥ ಸಂದರ್ಭದಲ್ಲೂ 'ಇಲ್ಲ'ವೆಂದು ಹೇಳುವುದು ಅವಳ ಜಾಯಮಾನವಾಗಿರಲಿಲ್ಲ. ಅವಳು ಚಿಕ್ಕವಳಿದ್ದಾಗ, ಅಗಿನ್ನೂ ಅವಳ ಅಪ್ಪನ ಜೊತೆ ಹಳ್ಳಿಯಲ್ಲಿದ್ದಳು. ಎರಡು ಬಾರಿ ಮಗುವಿಗೆ ಜನ್ಮವಿತ್ತಿದ್ದಳು. ಆದರೆ ಎರಡೂ ಉಳಿಯಲಿಲ್ಲ. ಅನೇಕ ಬಾರಿ ಅವಳ ಶ್ರಮದ ಕೆಲಸ ಗರ್ಭ ಪಾತಕ್ಕೆ ಕಾರಣವಾಗಿತ್ತು. ಬಹುಪಾಲು ನಿಶ್ಚಯವಾದಂತಿದ್ದು, ಕಡೆಗಳಿಗೆಯಲ್ಲಿ ತಪ್ಪಿಹೋದ, ರೈತಹುಡುಗ ವಾಜೆಯಿಕ್‌ನನ್ನು ಮಾತ್ರ ಯಾಂಡಾ ಎಂದೂ ಮರೆತಿರಲಿಲ್ಲ. ಸದಾ ಬೇರೆಯವರ ಬಳಿಯೇ ಕಳುಹಿಸುತ್ತಿದ್ದ ಶಾಲಂ ಬಂಜೋವ ರನನ್ನೂ ಅವಳು ಆಸೆಪಟ್ಟಿದ್ದಳು. ಅವನು 'ಯಾಂಡಾ ಮೂರನೇ ನಂಬರಿಗೆ ಹೋಗು, ಯಾಂಡಾ ಏಳನೇ ನಂಬರಿನ ರೂಮಿನ ಬಾಗಿಲು ತಟ್ಟು' ಎನ್ನುತ್ತಿದ್ದ. ಆದರೆ ತಾನು ಮಾತ್ರ ತನ್ನ ವಯಸ್ಸಾದ ಹೆಂಡತಿ ಶೇಂಡೆಲ್‌ಗೆ ನಿಷ್ಠೆಯಿಂದಿದ್ದ. ಅತನಿಗೆ ಯಾಂಡಾಳ ಬಗ್ಗೆ ಬಹುಶಃ ಜಿಗುಪ್ಸೆಯಿದ್ದಿರಬೇಕು. ಆದರೆ ಅವಳಿಗೆ ಮಾತ್ರ ಅತನ ಬಗ್ಗೆ ಆಸೆ. ಅವನ ಒಂದು ಒಳ್ಳೆಯ ಮಾತು ಉಳಿದವರ ಅನೇಕ ರತಿಕ್ರೀಡೆಗಳಿಗಿಂತ ಅವಳಿಗೆ ಹೆಚ್ಚು ಸಂತೋಷ ನೀಡುತ್ತಿತ್ತು. ಅವನು

ಬೈದರೂ ಅವಳಿಗೆ ಖುಷಿಯಾಗುತ್ತಿತ್ತು. ಕೆಲವೊಮ್ಮೆ ಬೈಗುಳಗಳಿಗಾಗಿಯೇ ಕಾದು ನಿಲ್ಲುತ್ತಿದ್ದಳು. ಅತಿಥಿಗಳಿಗೆ ಸಂಬಂಧಿಸಿದಂತೆ ಕೆಲವರನ್ನು ಬಿಟ್ಟರೆ ಉಳಿದೆಲ್ಲರೂ ಅವಳ ನೆನಪಿನಿಂದ ಮರೆಯಾಗಿದ್ದಾರೆ. ಒಬ್ಬ ರಷ್ಯನ್ ತನ್ನ ಮುಖದ ಮೇಲೆ ಉಗಿಯಲು, ಗಡ್ಡ ಕೀಳಲು, ಹೆಸರು ಹಿಡಿದು ಕರೆಯಲು ಒತ್ತಾಯಿಸಿದ್ದ. ಮತ್ತೊಬ್ಬ, ಕೆಂಪು ಕೆನ್ನೆಯ ಶಾಲಾ ಬಾಲಕ ಅವಳನ್ನು ಮುದ್ದಿಸಿ, ಅಮ್ಮನೆಂದು ಕರೆದು, ಬೇರೆಯವರು ಅವಳಿಗಾಗಿ ಕಾಯುತ್ತಿದ್ದರೂ ಇಡೀ ರಾತ್ರಿ ಅವಳ ಎದೆಯ ಮೇಲೆ ಮಲಗಿ ನಿದ್ರಿಸಿದ್ದ.

ಈಗ ಯೊಂಡಾಳಿಗೆ ವಯಸ್ಸಾಗಿದೆ. ಆದರೆ ಎಷ್ಟು ? ಅವಳಿಗೇ ತಿಳಿಯದು. ನಲವತ್ತಿರಬಹುದೇ, ಇರಬಹುದು. ಅಥವಾ ಐವತ್ತೂ ಆಗಿರಬಹುದಲ್ಲ ? ಅವಳ ವಯಸ್ಸಿನ ಇತರ ಹೆಂಗಸರು ಈಗಾಗಲೇ ಅಜ್ಜಿಯರಾಗಿದ್ದಾರೆ. ಆದರೆ ಅವಳು ಮಾತ್ರ ಅನಾಥಳಾಗಿ ಒಬ್ಬಳೇ ತನ್ನ ಹಳ್ಳಿಗೆ ಹಿಂತಿರುಗಿದ್ದಾಳೆ. ಹಳ್ಳಿಗೆ ಹೋದ ನಂತರ ಯಾವ ಗಂಡಸನ್ನೂ ಹತ್ತಿರ ಸೇರಿಸಬಾರದೆಂದು ಯೊಂಡಾ ನಿರ್ಧರಿಸಿದಳು. ಹಳ್ಳಿಯಲ್ಲಿ ಯಾವಾಗಲೂ ಒಂದಲ್ಲ ಒಂದು ಗಾಳಿ ಸುದ್ದಿಯಿರುತ್ತಿತ್ತು ಮತ್ತು ಅದು ಜಗಳದಲ್ಲೇ ಕೊನೆಯೂ ಆಗುತ್ತಿತ್ತು. ಅವಳಿಗೆ ಇದು ಯಾಕೆ ಬೇಕಿತ್ತು ? ನಿಜ ಹೇಳಬೇಕೆಂದರೆ ಇದುವರೆಗಿನ ಅವಳ ವಿಲಾಸೀ ಜೀವನ ಅವಳಿಗೆ ಯಾವುದೇ ರೀತಿಯ ಸಂತೋಷವನ್ನೂ ಕೊಟ್ಟಿರಲಿಲ್ಲ.

೩

ಅವಳಿಗೆ ದಾರಿ ತೋರಿಸಿದ ಜ್ಯೂಗಳು ಅವಳನ್ನು ದಾರಿ ತಪ್ಪಿಸಿರಲಿಲ್ಲ. ಒಂದು ಬೆಳಿಗ್ಗೆ ಅವಳು ಸ್ಕಿಬಿಕಾ ತಲುಪಿದ್ದಳು. ಊರು ಬಹಳಷ್ಟು ಬದಲಾಗಿದ್ದರೂ ತನ್ನ ಮನೆಯನ್ನು ಗುರ್ತಿಸಬಲ್ಲವಳಾಗಿದ್ದಳು. ಊರ ಹೊರಗಿನ ಚರ್ಚಿನಲ್ಲಿ ದೇವಮಾತೆ ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಅದೇ ಭಂಗಿಯಲ್ಲಿ ನಿಂತಿದ್ದಳು. ಆದರೆ ಈಗ ಮೂರ್ತಿ ಮಂಕಾಗಿತ್ತು, ಅಲ್ಲದೆ ಭುಜದ ಬಳಿ ಒಡೆದು ಚೂರಾಗಿತ್ತು. ಅವಳ ಕೊರಳಿನಲ್ಲಿ ಒಣಗಿದ ಹಾರವಿತ್ತು. ಯೊಂಡಾಳ ಕಣ್ಣುಗಳು ನೀರಿನಿಂದ ತುಂಬಿದವು. ಮಂಡಿಯೂರಿ ಕುಳಿತು ಶಿಲುಬೆಯಾಕಾರ

ಮಾಡಿ ನಮಸ್ಕರಿಸಿದಳು. ಹಳ್ಳಿಯೊಳಗೆ ಕಾಲಿಡುತ್ತಿದ್ದಂತೆ ಮರೆತುಹೋಗಿದ್ದ ಹಳೆಯ ವಾಸನೆಗಳೆಲ್ಲಾ ಅವಳನ್ನು ಮುತ್ತಿದುವು. ಕೊಳೆತ ಆಲೂಗಡ್ಡೆಯ ವಾಸನೆ, ಸುಟ್ಟ ರೆಕ್ಕೆಯ ವಾಸನೆ, ಹೆಸರು ತಿಳಿಯದ ಮೂಗಿಗೆ ಮಾತ್ರ ಅರಿವಾಗುವ ಇನ್ನೂ ಕೆಲವು ವಾಸನೆಗಳನ್ನು ಅವಳು ಅನುಭವಿಸಿದಳು. ಕೆಳ ಬಾಗಿಲು ಹಾಗೂ ಚಿಕ್ಕ ಕಿಟಕಿಗಳಿದ್ದ ಗುಡಿಸಲುಗಳು ನೆಲದಲ್ಲಿ ಅರ್ಧ ಹೂತಿದ್ದುವು. ಮೇಲು ಚಾವಣಿಗಳು ಪಾಚಿಗಟ್ಟಿದ್ದುವು. ಹೊಗೆ ಗೂಡಿನಿಂದ ದಟ್ಟವಾದ ಹೊಗೆ ಬರುತ್ತಿತ್ತು. ಯಾಂಡಾ ತನ್ನ ತಂದೆ ತಾಯಿಗಳಿದ್ದ ಗುಡಿಸಲಿಗಾಗಿ ಹುಡುಕಿದಳು, ಆದರೆ ಆ ಜಾಗದಲ್ಲಿ ಗುಡಿಸಿಲಿರಲಿಲ್ಲ. ಬದಲಾಗಿ ಒಬ್ಬ ಅಕ್ಕಸಾಲಿಗನ ಕುಲುಮೆ ಇತ್ತು. ಯಾಂಡಾ ತಾನು ಹೊತ್ತಿದ್ದ ಚೀಲವನ್ನು ಕೆಳಗಿಟ್ಟಳು. ನಾಯಿಗಳು ಅವಳತ್ತ ನೋಡಿ ಗುರುಗುಡುತ್ತಾ ಬೊಗಳಲಾರಂಭಿಸಿದವು. ಹೆಂಗಸರು ಬಾಗಿಲ ಮರೆಯಿಂದ ಇಣುಕಿ ನೋಡಿದರು. ಚಿಕ್ಕವರಿಗೆ ಅವಳು ಯಾರೆಂದು ತಿಳಿಯದು. ಆದರೆ ದೊಡ್ಡವರು ಗುರ್ತಿಸಿದರು. ಕೂಡಲೇ 'ಅಪ್ಪ, ಅಮ್ಮ, ಜೇಸು, ಮರಿಯಾ' ಎಂದು ಸಂತೋಷದಿಂದ ಎಲ್ಲರನ್ನೂ ಕೂಗಿದರು.

ಹೌದು, ನಿಜ. ಅವಳು ಯಾಂಡಾ.

ಗಂಡಸರೂ ಅವಳನ್ನು ನೋಡಲು ಬಂದರು. ನಿದ್ದೆ ಮಾಡುತ್ತಿದ್ದ ಕೆಲವರು ಹಾಗೇ ಎದ್ದು ಬಂದರು. ಮದ್ಯದಂಗಡಿಯಿಂದ ಕೆಲವರು ಬಂದರು. ಒಬ್ಬಳು ರೈತ ಹೆಂಗಸು ಯಾಂಡಾಳನ್ನು ತನ್ನ ಗುಡಿಸಿಲಿಗೆ ಕರೆದುಕೊಂಡು ಹೋದಳು. ರೊಟ್ಟಿಯ ತುಂಡು ಹಾಗೂ ಒಂದು ಲೋಟ ಹಾಲು ಕೊಟ್ಟಳು. ಯಾಂಡಾ ಸುತ್ತಲೂ ನೋಡಿದಳು. ಕಸ ತುಂಬಿದ ನೆಲದ ಮೂಲೆಯಲ್ಲಿ ಬುಟ್ಟಿಗಳಲ್ಲಿ ಮೂಲಂಗಿ, ಬೀಟ್‌ರೂಟ್, ಆಲೂಗೆಡ್ಡೆ ಮೊದಲಾದವುಗಳನ್ನು ತುಂಬಿಸಿಟ್ಟಿತ್ತು. ಕೋಳಿ ಮರಿಗಳು ಗೂಡಿನಲ್ಲಿ ಚೀಂವ್‌ಗುಡುತ್ತಿದ್ದುವು. ಒಲೆಯ ಮೇಲೆ ಕೆಟಲ್‌ನಲ್ಲಿ ನೀರು ಕಾಯುತ್ತಿತ್ತು. ಮತ್ತೊಂದು ಮೂಲೆಯಲ್ಲಿ ಜಡೆಗಟ್ಟಿದ್ದ ಬೆಳ್ಳಿ ಕೂದಲಿನ ಮುದುಕಿಯೊಬ್ಬಳು ಮಗ್ಗದ ಮುಂದೆ ಕುಳಿತಿದ್ದಳು. ಯಾರೋ ಒಬ್ಬರು ಅವಳ ಬಳಿಗೆ ಹೋಗಿ ಕಿವಿಯಲ್ಲಿ ಕಿರುಚಿದರು. 'ಅಜ್ಜಿ, ಇವಳು ಯಾಂಡಾ. ಪಾವೆಲ್ ಕುಚುಮಾನ ಮಗಳು'. ವಯಸ್ಸಾದ ಆ ಮುದುಕಿ ತನಗೆ ತಾನೇ ಕೈಗಳನ್ನು ಶಿಲುಬೆಯಾಕಾರದಲ್ಲಿ ಆಡಿಸಿದಳು.

ರೈತ ಹೆಂಗಸರೆಲ್ಲಾ ಒಟ್ಟಿಗೆ ಸೇರಿ ಮಾತನಾಡಲಾರಂಭಿಸಿದರು. ಪಾವೆಲ್ ಕುಚುಮಾನ ಮನೆ ಸುಟ್ಟುಹೋಗಿದ್ದಿತು. ಯಾಂಡಾಳ ಸಹೋದರ ಬೋಲೆಕ್ ಯುದ್ಧಕ್ಕೆ ಹೋದವನು ಮತ್ತೆ ಹಿಂದಿರುಗಿರಲಿಲ್ಲ. ಅವಳ ತಂಗಿ ಸ್ಟಾಸಿಯಾ, ಹೆರಿಗೆಯ ಸಮಯದಲ್ಲಿ ಮಗುವೊಂದನ್ನು ಹೆತ್ತು ಸತ್ತಿದ್ದಳು. ವಾಜೆವಿಕ್‌ಗೆ ಏನಾಯಿತೆಂದೂ ಸಹ ಅವರು ಯಾಂಡಾಳಿಗೆ ತಿಳಿಸಿದರು. ಆತ ಜೋಕಾಳನ್ನು ಮದುವೆಯಾದ. ಅವಳಿಂದ ಆತನಿಗೆ ಹದಿನಾಲ್ಕು ಮಕ್ಕಳಾದವು. ಅವುಗಳಲ್ಲಿ ಒಂಬತ್ತು ಮಕ್ಕಳು ಈಗಲೂ ಬದುಕಿ ಉಳಿದಿವೆ. ಆದರೆ ಆಕೆ ವಿಷಮಶೀತ ಜ್ವರದಿಂದ ಸತ್ತಳು. ವಾಜೆವಿಕ್ ಇತ್ತೀಚಿನ ದಿನಗಳಲ್ಲಿ ಸದಾ ಕುಡಿಯುತ್ತಾನೆ. ಜೋಕಾ ಮಕ್ಕಳಿಗಾಗಿ ಬೇರೆಯವರ ಮನೆಯಲ್ಲಿ ಕೆಲಸ ಮಾಡುತ್ತಿದ್ದಳು. ಮೂರು ವರ್ಷಗಳ ಹಿಂದೆ ಆಕೆ ಸತ್ತ ನಂತರ ವಾಜೆವಿಕ್ ತೀರಾ ಸೋತಿದ್ದಾನೆ. ದುಡಿಯುವ ಪ್ರತಿಯೊಂದು ದಮ್ಮಡಿಯೂ ಕುಡಿತಕ್ಕೆ ಹೋಗುತ್ತದೆ. ಗಂಡು ಮಕ್ಕಳು ದಾರಿ ತಪ್ಪಿದ್ದಾರೆ. ಹೆಣ್ಣು ಮಕ್ಕಳು ಜ್ಯೂಗಳ ಮನೆಯಲ್ಲಿ ಮನೆ ಕೆಲಸ ಮಾಡುತ್ತಾರೆ. ಆತನ ಗುಡಿಸಲು ಮುರಿದು ಬೀಳುವ ಸ್ಥಿತಿಯಲ್ಲಿದೆ. ಹೆಂಗಸರು ಹೀಗೆ ಮಾತನಾಡುತ್ತಿರುವಾಗ ಒಬ್ಬಾತ ಬಾಗಿಲು ತೆಗೆದು ಒಳ ನುಗ್ಗಿದ. ತೆಳ್ಳಗೆ ಉದ್ದಕಿದ್ದ ಆತ ಬರಿಗಾಲಿನಲ್ಲಿದ್ದ. ಪ್ಯಾಂಟ್ ಹರಿದು ತೂತುಗಳಾಗಿತ್ತು. ಒಳ ಅಂಗಿಯಿಲ್ಲದೆ ತೆರೆದ ಜಾಕೆಟ್ ತೊಟ್ಟಿದ್ದ. ಉದ್ದ ಕೂದಲುಗಳಿದ್ದು ತಲೆ ಕೆದರಿತ್ತು–ಒಟ್ಟಾರೆ ನೋಡಲು ಬೆದರುಬೊಂಬೆಯಂತಿದ್ದ. ಆತನಿಗೆ ನಡೆಯಲಾಗುತ್ತಿರಲಿಲ್ಲ. ತೂರಾಡುತ್ತಾ ಒಳಬಂದ. ಯಾರೋ ಕೇಳಿದರು : 'ವಾಜೆವಿಕ್, ಈ ಹೆಂಗಸನ್ನು ಗುರ್ತಿಸಬ[illegible]



'ಸಿಡುಬಿನ ಕಲೆಯ ಯಾಂಡಾ'

ಎಲ್ಲರೂ ಚಪ್ಪಾಳೆ ತಟ್ಟಿ ನಕ್ಕರು. ಅನೇಕ ವರ್ಷಗಳ ನಂತರ ಮೊದಲ ಬಾರಿಗೆ ಯಾಂಡಾ ನಾಚಿ ಕೆಂಪಾದಳು.

'ನೀನು ವಿಲಾಸಿನಿಯೆಂದು ಕೇಳಿದೆ'

ಮತ್ತೆ ನಗುವಿನ ಅಲೆಯೆದ್ದಿತು.

'ಅವನ ಮಾತಿಗೆ ಲಕ್ಷ್ಯ ಕೊಡಬೇಡ ಯಾಂಡಾ. ಅವನೊಬ್ಬ ಕುಡುಕ, ಕುಡಿದು ಬಂದಿದ್ದಾನೆ.'

'ಹಾಂ, ನಾನು ಕುಡಿದಿರುವೆನಾ ? ಯಾರೂ ನನಗೆ ಒಂದು ಹನಿ ವೋಡ್ಕಾ ಸಹ ಕೊಡಲಿಲ್ಲ.'

ಯಾಂಡಾ ಅವನತ್ತ ನೋಡಿದಳು. ವಾಜೆವಿಕ್ ಇವನೇನಾ ? ಕೆಲವು ಹೋಲಿಕೆಗಳು ಮಾತ್ರ ಉಳಿದಿದ್ದುವು. ಅವಳಿಗೆ ತೀವ್ರವಾಗಿ ಅಳಬೇಕೆನ್ನಿಸಿತು. ರೇಂಡಲ್‌ಳ ಮಾತುಗಳು ನೆನಪಿಗೆ ಬಂದುವು : 'ಕೆಲವರು ಸತ್ತಾಗ, ಇರುವುದಕ್ಕಿಂತ ಚೆನ್ನಾಗಿ ಕಾಣಿಸುತ್ತಾರೆ.' ಯಾಂಡಾ ತಿರುಗಿ ಹಳ್ಳಿಗೆ ಬಂದುದಕ್ಕೆ ನೊಂದುಕೊಂಡಳು.

ಹೆಂಗಸೊಬ್ಬಳು ಹೇಳಿದಳು : 'ಯಾಂಡಾ, ನೀನು ಅವನ ಮಕ್ಕಳನ್ನು ನೋಡಬಹುದಲ್ಲವಾ ?' ಯಾಂಡಾ ತಕ್ಷಣ ತನ್ನ ಚೀಲವನ್ನು ಕೈಗೆತ್ತಿಕೊಂಡಳು. ರೊಟ್ಟಿ ಹಾಗೂ ಹಾಲು ನೀಡಿದ್ದಕ್ಕಾಗಿ ಹಣ ಕೊಡಹೋದಳು. ಆದರೆ ಆ ರೈತ ಹೆಂಗಸು ಅದನ್ನು ತಿರಸ್ಕರಿಸಿ 'ಇದು ಪಟ್ಟಣವಲ್ಲ, ರೊಟ್ಟಿ ಹಾಲಿಗೆ ಹಣ ಕೊಡಲು' ಎಂದಳು.

ವಾಜೆವಿಕ್‌ನ ಗುಡಿಸಲು ಹತ್ತಿರದಲ್ಲೇ ಇತ್ತು. ಮೇಲ್ಛಾವಣಿ ಹೆಚ್ಚು ಕಡಿಮೆ ನೆಲಕ್ಕೆ ಅಂಟಿಕೊಂಡಂತೆಯೇ ಇತ್ತು. ಮೇಲೆ ಗಿಡಗಂಟಿಗಳು ಬೆಳೆದು ಇಳಿಬಿದ್ದಿದ್ದುವು. ಕಿಟಕಿಗಳಿಗೆ ಬಾಗಿಲುಗಳಿರಲಿಲ್ಲ. ಏನೇನೋ ತುರುಕಿ ಮುಚ್ಚಿದ್ದರು. ಒಳಗೆ ಹೋದರೆ ಗುಹೆ ಹೊಕ್ಕಂತಾಗುತ್ತಿತ್ತು. ನೆಲ ತೀರಾ ಹೊಲಸಾಗಿತ್ತು. ಗೋಡೆಗಳು ಹೊಗೆ ಗೂಡಿನ ಒಳಭಾಗಕ್ಕಿಂತ ಹೆಚ್ಚು ಕಪ್ಪಾಗಿದ್ದುವು. ಮಸುಕತ್ತಲಿನಲ್ಲಿ ಯಾಂಡಾ ಮಕ್ಕಳನ್ನು ನೋಡಿದಳು. ಇಡೀ ವಾತಾವರಣ ಕೆಟ್ಟ ವಾಸನೆಯಿಂದ ಕೂಡಿತ್ತು. ಯಾಂಡಾ ಮೂಗು ಮುಚ್ಚಿಕೊಂಡಳು. ಇಬ್ಬರು ಹೆಣ್ಣು ಮಕ್ಕಳು ಅಲ್ಲೇ ಇದ್ದ ಸೊಟ್ಟಿಯ ಬಳಿ ನಿಂತಿದ್ದರು. ಅರೆನಗ್ನರಾಗಿದ್ದ ಮಕ್ಕಳೆರಡು ನೆಲದ ಮೇಲೆ ಹೊರಳಾಡುತ್ತ ತಲೆ ತುಂಬ ಧೂಳು ತುಂಬಿಕೊಂಡಿದ್ದುವು. ಒಂದು ಮಗು ಬೆಕ್ಕಿನ ಮರಿಯ ಬಾಲ ಎಳೆಯುತ್ತಿತ್ತು. ಕುರುಡ ಹುಡುಗನೊಬ್ಬ ಒಲೆಯನ್ನು ಸರಿಪಡಿಸುತ್ತಿದ್ದ. ಯಾಂಡಾ ತಬ್ಬಿಬ್ಬಾದಳು. ಅವಳು ಇಂಥ ಪರಿಸರಕ್ಕೆ ಒಗ್ಗಿದವಳಲ್ಲ. ಹೋಟೆಲಿನಲ್ಲಿ ಪ್ರತಿವಾರ ಹಾಸಿಗೆ ಹೊದಿಕೆ ಶುಚಿ ಮಾಡಿ, ಮೇಲು ಹೊದಿಕೆ ಬದಲಾಯಿಸುತ್ತಿದ್ದರು. ಮೂರು ದಿನಕ್ಕೊಮ್ಮೆ ಅತಿಥಿಗಳಿಗೆ ಹೊಸ ಟವೆಲ್ ಕೊಡಲಾಗುತ್ತಿತ್ತು. ಅಲ್ಲಿ ಬಿಸಾಕುತ್ತಿದ್ದ ಆಹಾರ ಇಲ್ಲಿನ ಇಡೀ ಸಂಸಾರಕ್ಕಾಗುತ್ತಿತ್ತು.

ಸರಿ ಕೊಳೆಯನ್ನು ಹೇಗಾದರೂ ತೆಗೆಯಲೇಬೇಕಲ್ಲ? ಅದೇನು ತನಗೆ ತಾನೆ ಶುದ್ಧವಾಗಿ ಬಿಡುವುದಿಲ್ಲವಲ್ಲ?

ಯಾಂಡಾ ಸಿದ್ಧವಾದಳು. ಅವಳ ಬಳಿ ಇನ್ನೂ ಸ್ವಲ್ಪ ಹಣವಿತ್ತು. ಅವಳು ಹುಡುಗಿಯರಲ್ಲೊಬ್ಬಳನ್ನು ಕರೆದು ತಿನ್ನಲು ಏನಾದರೂ ತರಲು ಕಳಿಸಿದಳು. ಜ್ಯೂನ ಅಂಗಡಿಯಲ್ಲಿ ತಿನ್ನುವಂಥ ತಿನಿಸುಗಳು ಸಾಕಷ್ಟಿದ್ದುವು. ಅಯ್ಯೋ ದೇವರೇ! ತಂದುದನ್ನು ಮಕ್ಕಳು ಗಬಗಬ ತಿಂದರು. ಯಾಂಡಾ ಕಸಗುಡಿಸಿ, ನೆಲ ಸಾರಿಸಲು ಆರಂಭಿಸಿದಳು. ಬಾವಿಯಿಂದ ನೀರು ತಂದಳು. ಮೊದಮೊದಲು ಹುಡುಗಿಯರು ಅವಳನ್ನು ನಿರ್ಲಕ್ಷ್ಯಿಸಿದರು. ಆದರೆ ಯಾಂಡಾ 'ನಿಮ್ಮ ತಾಯಿ ನನ್ನ ಸ್ನೇಹಿತೆ, ಇಲ್ಲಿಂದ ನಾನೇನೂ ತೆಗೆದುಕೊಂಡು ಹೋಗುವುದಿಲ್ಲ' ಎಂದು ಅವರನ್ನು ರಮಿಸಿದಳು.

ಯಾಂಡಾ ಸಂಜೆಯವರೆಗೆ ಕೆಲಸ ಮಾಡಿದಳು. ನೀರು ಕಾಯಿಸಿ ಮಕ್ಕಳಿಗೆ ಸ್ನಾನ ಮಾಡಿಸಿದಳು. ಹಿರಿಯ ಹುಡುಗನನ್ನು ಕಳಿಸಿ ಸೋಪು, ಎಣ್ಣೆ, ಬಾಚಣಿಗೆ ಇತ್ಯಾದಿ ತರಿಸಿದಳು. ಅನೇಕ ಸಾರಿ ಕ್ರಿಮಿನಾಶಕ ಸಿಂಪಡಿಸಿ ನೆಲ ತೊಳೆದು, ನೀರನ್ನು ಆಚೆ ಚೆಲ್ಲುತ್ತಿದ್ದಳು. ನೆರೆಹೊರೆಯವರು ಬಂದು ನೋಡಿ ತಲೆಯಲ್ಲಾಡಿಸುತ್ತಿದ್ದರು. ಅವರೆಲ್ಲರದೂ ಒಂದೇ ಅಭಿಪ್ರಾಯವಾಗಿತ್ತು: 'ಯಾಂಡಾ ಮಾಡುವುದು ವ್ಯರ್ಥ: ಗುಡಿಸಲಿನಿಂದ ತಿಗಣೆಗಳನ್ನು, ಇರುವೆಗಳನ್ನು ತೆಗೆಯುವುದು ಸಾಧ್ಯವೇ ಇಲ್ಲ'. ಕತ್ತಲಾಯಿತು. ಹಚ್ಚಲು ದೀಪವಿರಲಿಲ್ಲ. ಯಾಂಡಾ ಒಂದು ಪುಟ್ಟ ಸೀಮೆಎಣ್ಣೆ ದೀಪವನ್ನು ತಂದಳು. ಇಡೀ ಸಂಸಾರ ಒಂದು ಮರದ ಮಂಚದಂತಹುದರ ಮೇಲೆ ಹೊದಿಕೆ ಹೊದೆದು ಮಲಗಿತು. ಯಾಂಡಾ ತನ್ನ ಹೊದಿಕೆಗಳನ್ನೂ ಮಕ್ಕಳಿಗೆ ಕೊಟ್ಟಳು. ರಾತ್ರಿ ಬಹಳ ಹೊತ್ತು ಕಳೆದ ಮೇಲೆ ಬಾಗಿಲು ತೆರೆಯಿತು. ವಾಜೆಕ್ ಒಳಬಂದ. ಹುಡುಗಿಯರು ಕಿಸಕ್ಕನೆ ನಕ್ಕರು. ಸ್ಟೆಫಾನ್, ಕುರುಡ ಹುಡುಗ, ಯಾಂಡಾಳ ಜೊತೆ ಈಗಾಗಲೇ ಸ್ನೇಹದಿಂದಿದ್ದವನು ಹೇಳಿದ–'ಓಹೋ ಕುಡುಕ ಬಂದ'.

'ನಿನ್ನ ತಂದೆಯ ಬಗ್ಗೆ ನೀನು ಹಾಗೆ ಮಾತನಾಡಬಾರದು.'

ಸ್ಟೆಫಾನ್ ಹಳ್ಳಿಯೊಂದರ ಗಾದೆ ಹೇಳುತ್ತಾ ಉತ್ತರಿಸಿದ: 'ನಿನ್ನ ತಂದೆ ನಾಯಿಯಾಗಿದ್ದರೆ ಚು ಚೂ ಚೂ.... ಎಂದೇ ಕರೆಯಬೇಕಾಗುತ್ತದೆ.'

ಯಾಂಡಾ ವಾಜೆಕ್‌ಗಾಗಿ ಒಂದಿಷ್ಟು ತಿನಿಸು ತೆಗೆದಿರಿಸಿದ್ದಳು. ಆದರೆ

ಆತ ಅದನ್ನು ತಿನ್ನುವ ಸ್ಥಿತಿಯಲ್ಲಿರಲಿಲ್ಲ. ಅಸಾಧ್ಯ ಕುಡಿದಿದ್ದ. ಏನೋ ಗೊಣಗುತ್ತ ಅಲ್ಲೇ ಒಂದು ಕಡೆ ಬಿದ್ದುಕೊಂಡ. ಹುಡುಗಿಯರು ಆತನನ್ನು ತುಳಿದುಕೊಂಡೇ ಓಡಾಡಿದರು. ಗುಡಿಸಿಲಿನ ಹಿಂಭಾಗದ ಶೆಡ್‌ನಲ್ಲಿ ಒಂದು ಚಾಪೆಯಿದೆ, ಅದನ್ನು ತೆಗೆದುಕೊಳ್ಳಬಹುದೆಂದು ಸ್ಟೆಫಾನ್ ಯಾಂಡಾಳಿಗೆ ಸೂಚಿಸಿದ. ಅದೆಲ್ಲಿದೆಯೆಂದು ತೋರಿಸುತ್ತೇನೆಂದು ತಾನೇ ಮುಂದಾದ. ಅವಳು ಅದರ ಬಾಗಿಲು ತೆರೆಯುತ್ತಿದ್ದಂತೆ, ಆ ಹುಡುಗ ಅವಳನ್ನು ಶೆಡ್ ಒಳಗೆ ಬಲವಾಗಿ ತಳ್ಳಿದ. ಅವಳು ಕೆಳಗೆ ಬಿದ್ದಳು. ಅವನು ತಕ್ಷಣ ತನ್ನನ್ನು ಅವಳ ಮೇಲೆಳೆದುಕೊಂಡ. ಅವಳು ಇದು ಅನ್ಯಾಯ, ಪಾಪ ಎಂದು ಹೇಳಲು ಪ್ರಯತ್ನಿಸಿದಳು. ಆದರೆ ಆತ ಅವಳ ಬಾಯಿಯನ್ನು ಬಲವಾಗಿ ತನ್ನ ಕೈಗಳಿಂದ ಮುಚ್ಚಿದ. ಅವಳು ತಪ್ಪಿಸಿಕೊಳ್ಳಲು ಪ್ರಯತ್ನಿಸಿದಳು. ಅವನು ತನ್ನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಿದ. ಕತ್ತಲೆಯಲ್ಲಿ ಅವಳು ಮೈಚಾಚುತ್ತಿದ್ದಂತೆ ಹುಡುಗ ತೃಪ್ತನಾದ. ಯಾಂಡಾ ಕಣ್ಣುಗಳನ್ನು ಮುಚ್ಚಿಕೊಂಡಳು. 'ಹೌದು ಹೇಗೂ ಎಲ್ಲವನ್ನೂ ನಾನು ಕಳೆದುಕೊಂಡವಳು' ಎಂದವಳು ಯೋಚಿಸುತ್ತಾ ಮೆಲ್ಲಗೆ ಹೇಳಿದಳು : 'ಅಯ್ಯೋ ! ನಾನು ನಿನ್ನ ತಾಯಿಯಾಗಬೇಕಾಗಿದ್ದವಳು.'

●

## ಜಡೆಬಿಲ್ಲೆ

ವುಲ್ಫ್‌ಬೆರ್ ಯಾವಾಗ ಪ್ರಯಾಣ ಹೋಗಿ ಬಂದರೂ ಸಿಲಿಯಾ ಮತ್ತು ಮಕ್ಕಳಿಗೆ ಉಡುಗೊರೆಗಳನ್ನು ತರುತ್ತಿದ್ದ. ಈ ಸಾರಿ ವುಲ್ಫ್‌ಬೆರ್‌ನ ಅದೃಷ್ಟ ಖುಲಾಯಿಸಿತ್ತು. ಅವನು ಬೀರುವೊಂದನ್ನು ಒಡೆದು 750 ರೂಬೆಲ್‌ಗಳನ್ನು ಕದ್ದಿದ್ದ. ಜೊತೆಗೆ, ಎರಡನೇ ದರ್ಜೆ ರೈಲು ಪ್ರಯಾಣದಲ್ಲಿ ಶ್ರೀಮಂತ ರಷ್ಯನ್ ಒಬ್ಬನ ಜೊತೆ ಇಸ್ಪೀಟಾಟವಾಡಿ 150 ರೂಬೆಲ್‌ಗಳನ್ನು ಗೆದ್ದಿದ್ದ. ಬಹಳ ಹಿಂದೆಯೇ ವುಲ್ಫ್‌ಬೆರ್ 'ಎಲ್ಲವೂ ಅದೃಷ್ಟವಿದ್ದ ಹಾಗೆ' ಎಂಬ ನಿರ್ಧಾರ ತಲುಪಿದ್ದ. ಕೆಲವೊಮ್ಮೆ ಅವನ ಲೆಕ್ಕಾಚಾರವೆಲ್ಲ ತಪ್ಪುತ್ತಿತ್ತು. ಮತ್ತೆ ಕೆಲವೊಮ್ಮೆ ಎಲ್ಲ ಸರಿ ಹೋಗುತ್ತಿತ್ತು. ಈ ಪ್ರವಾಸ ಆರಂಭದಿಂದಲೇ ಸರಿಯಾಗಿ ಶುರುವಾಗಿತ್ತು. ಕೇವಲ ತಮಾಷೆಗಾಗಿ ಆತ ಒಬ್ಬನ ಜೇಬು ಕತ್ತರಿಸಿದ್ದ. (ಸಾಮಾನ್ಯವಾಗಿ ಬೀರು ಒಡೆಯುವವನು ಜೇಬು ಕತ್ತರಿಸುವುದಿಲ್ಲ) ಪರ್ಸ್ ತುಂಬ ಬ್ಯಾಂಕ್ ನೋಟುಗಳಿದ್ದುವು. ನಂತರ ಟರ್ಕಿಷ್ ಬಾತ್‌ರೂಂನಲ್ಲಿ ಆತನಿಗೊಂದು ಚಿನ್ನದ ಚೈನಿನ ಗಡಿಯಾರ ಸಿಕ್ಕಿತ್ತು. ಹೀಗೆ 'ವ್ಯಾಪಾರ' ಕುದುರಿದಾಗಲೆಲ್ಲ ಆತ ದೇವರಿಗೆ ನಮಸ್ಕರಿಸಿ 'ಬಡವರ ಹುಂಡಿ'ಯಲ್ಲಿ ಕೆಲವು ನಾಣ್ಯಗಳನ್ನು ಹಾಕುತ್ತಿದ್ದ. ವುಲ್ಫ್‌ಬೆರ್ ಯಾವುದೇ ಕಳ್ಳರ ಗುಂಪಿಗೆ ಸೇರಿದವನಲ್ಲ. ನಡವಳಿಕೆಯಲ್ಲಿ ಆತ ಸಭ್ಯನಾಗಿದ್ದ. ಕಳ್ಳತನ ಪಾಪವೆಂಬುದು ಆತನಿಗೆ ಗೊತ್ತಿತ್ತು. ಆದರೆ ವ್ಯಾಪಾರಿಗಳು ಕಳ್ಳರಿಗಿಂತ ಏನು ಕಡಿಮೆ ? ಅತ್ಯಂತ ಕಡಿಮೆ ಬೆಲೆಗೆ ಕೊಂಡು ಅಧಿಕ ಬೆಲೆಗೆ ಮಾರುವುದಿಲ್ಲವೇ ? ಕೆಲವು ವರ್ಷಗಳಿಗೊಮ್ಮೆ 'ದಿವಾಳಿ'ಯೆಂದು ಘೋಷಿಸಿ ಹಣ ಧೋಕಾ ಮಾಡುವುದಿಲ್ಲವೇ ? ವುಲ್ಫ್‌ಬೆರ್ ಒಮ್ಮೆ ಲುಬ್ಲಿನ್‌ನಲ್ಲಿ ಚರ್ಮ ಹದ ಮಾಡುವ ಕಾರ್ಖಾನೆಯಲ್ಲಿ ಕಾರ್ಮಿಕನಾಗಿ

ದುಡಿಯುತ್ತಿದ್ದ. ಆದರೆ ಆ ಶಾಖ, ಆ ಧೂಳು, ಆ ಕೆಟ್ಟ ವಾಸನೆ ಆತನಿಗೆ ಹಿಡಿಸಿರಲಿಲ್ಲ. ಅಲ್ಲಿಯ ಮೇಸ್ತ್ರಿಯೋ ಸದಾ ಕಿರುಚಾಡುತ್ತಾ ಕಾರ್ಮಿಕರಿಂದ ಹೆಚ್ಚು ಕೆಲಸ ತೆಗೆಯಲು ಪ್ರಯತ್ನಿಸುತ್ತಿದ್ದ. ಆದರೆ ಅವರ ಸಂಪಾದನೆ ಗಂಜಿಗೂ ಸಾಲುತ್ತಿರಲಿಲ್ಲ. ಅದಕ್ಕಿಂತ ಜೈಲಿನಲ್ಲಿ ಕೊಳೆಯುವುದು ಎಷ್ಟೋ ವಾಸಿಯಾಗಿತ್ತು.

ವುಲ್ಫ್‌ಬೆರ್ ಬಹಳ ದಿನಗಳಿಂದಲೂ ಕಳ್ಳತನ ಮಾಡಿ ಜೀವಿಸುವುದಕ್ಕೆ ಹೊಂದಿಕೊಂಡು ಬಿಟ್ಟಿದ್ದ. ಕೆಲವೊಮ್ಮೆ ಆತ ಸಿಕ್ಕಿಬಿದ್ದಿದ್ದರೂ ಸುಲಭವಾಗಿ ಬಿಡುಗಡೆ ಹೊಂದಿದ್ದ. ಅವನಿಗೆ ಪೋಲಿಸು ಅಧಿಕಾರಿಗಳೊಡನೆ ಹೇಗೆ ಮಾತನಾಡಬೇಕೆಂದು ಚೆನ್ನಾಗಿ ಗೊತ್ತಿತ್ತು. 'ಸರ್, ನನಗೆ ಹೆಂಡತಿ ಮಕ್ಕಳಿದ್ದಾರೆ....' ಅವನೆಂದೂ ಒರಟಾಗಿ ಮಾತನಾಡುತ್ತಿರಲಿಲ್ಲ. ನಯವಾಗಿ ಮಾತಾಡಿ ಮನಸ್ಸು ಗೆಲ್ಲುತ್ತಿದ್ದ. ಜೈಲಿನಲ್ಲೂ ಸಹ ಆತ ಜೊತೆಯ ಕೈದಿಗಳೊಡನೆ ಎಂದೂ ಜಗಳವಾಡಿದವನಲ್ಲ. ತನ್ನ ಬಳಿಯಿದ್ದ ಹಣ, ಸಿಗರೇಟು ಇತ್ಯಾದಿಗಳನ್ನು ಅವರೊಡನೆ ಹಂಚಿಕೊಳ್ಳುತ್ತಿದ್ದ. ಅವರಿಗೆ ಕಾಗದಗಳನ್ನು ಬರೆದುಕೊಡುತ್ತಿದ್ದ. ವುಲ್ಫ್‌ಬೆರ್ ಗೌರವಾನ್ವಿತ ಮನೆತನದಿಂದ ಬಂದವನು. ಆತನ ತಂದೆ ಮನೆಗೆ ಸುಣ್ಣ ಬಣ್ಣ ಹೊಡೆಯುವ ಸಭ್ಯ ಮನುಷ್ಯನಾಗಿದ್ದ. ಅವನ ತಾಯಿ ಒಂದು ಚಿಕ್ಕ ಮಾಂಸದ ಅಂಗಡಿ ಇಟ್ಟಿದ್ದಳು. ಅವರ ಮನೆತನದಲ್ಲಿ ವುಲ್ಫ್‌ಬೆರ್ ಒಬ್ಬನೇ ಕಳ್ಳನಾಗಿದ್ದವನು. ವುಲ್ಫ್‌ಬೆರ್ ಈಗಾಗಲೇ ನಲ್ವತ್ತು ವರ್ಷ ದಾಟಿದ, ವಿಶಾಲ ಭುಜದ, ಕಂದು ಕಣ್ಣಿನ, ಪೋಲಿಷ್ ರೀತಿಯಲ್ಲಿ ತಿರುಗಿಸಿ ಹುರಿ ಮಾಡಿದ ಮೀಸೆಯುಳ್ಳ, ಮಟ್ಟಸವಾದ ಎತ್ತರದ ಆಳು. ಅವನು ಯಾವಾಗಲೂ ಪ್ರಮಾಣಕ್ಕೆ ಉಚಿತವಾದ ಪ್ಯಾಂಟ್ ಹಾಗೂ ಚೂಪಾದ ತುದಿಯ ಶೂಗಳನ್ನು ಹಾಕಿರುತ್ತಿದ್ದು ಸುಸಂಸ್ಕೃತನಂತೆ ಕಾಣಿಸುತ್ತಿದ್ದ. ಜ್ಯೂಗಳು ಇಂತಹ ಶೂಗಳನ್ನು ಹಾಕುವುದು ಸಾಧ್ಯವಿಲ್ಲವೆಂಬುದು ಪೋಲಿಷರ ನಂಬಿಕೆಯಾಗಿತ್ತು. ಏಕೆಂದರೆ ಜ್ಯೂಗಳ ಪಾದ ಅಗಲವಾಗಿರುತ್ತದೆಯೇ ಹೊರತು ಉದ್ದವಾಗಿರುವುದಿಲ್ಲ. ವುಲ್ಫ್‌ಬೆರ್‌ನ ಟೋಪಿಗೆ ಮುಂಭಾಗದಲ್ಲಿ ಚರ್ಮದ ಹೊದಿಕೆಯಿದ್ದು, ಅದು ಅವನ ಕಣ್ಣುಗಳನ್ನು ಬಿಸಿಲಿನಿಂದ ರಕ್ಷಿಸುತ್ತಿತ್ತು. ಅವನ ಎದೆಯ ಮೇಲೆ ಗಡಿಯಾರದ ಸರಪಳಿ ತೂಗಾಡುತ್ತಿದ್ದು, ಅದರೊಂದಿಗೆ ಕಿವಿಯ ಗುಗ್ಗೆ ತೆಗೆಯುವ ಒಂದು ಪುಟ್ಟ ಚಮಚವಿತ್ತು. ಬೇರೆ ಕಳ್ಳರು ಸಾಮಾನ್ಯವಾಗಿ ಪಿಸ್ತೂಲು ಅಥವಾ

ಸ್ಪ್ರಿಂಗ್ ಚೂರಿಗಳನ್ನು ಇಟ್ಟುಕೊಂಡಿರುತ್ತಿದ್ದರು. ಆದರೆ ವುಲ್ಫ್‌ಬೆರ್ ಎಂದೂ ಅಂತಹ ಆಯುಧಗಳನ್ನಿಡುತ್ತಿರಲಿಲ್ಲ. ಪಿಸ್ತೂಲು ಎಂದಾದರೂ ಗುಂಡು ಹಾರಿಸುತ್ತದೆ; ಚೂರಿ ಎಂದಾದರೂ ತಿವಿಯುತ್ತದೆ. ಯಾಕೆ ರಕ್ತಪಾತ ? ಮತ್ತೊಬ್ಬರಿಗೆ ಯಾಕೆ ಇಂತಹ ಉಗ್ರ ಶಿಕ್ಷೆ ನೀಡಬೇಕು ? ವುಲ್ಫ್‌ಬೆರ್ ತನ್ನನ್ನು ತಾನು ನಿಯಂತ್ರಿಸಿಕೊಳ್ಳಬಲ್ಲ ಎಚ್ಚರದ ಮನುಷ್ಯನಾಗಿದ್ದ. ಆತನಿಗೆ ಯೋಚಿಸುವ ಶಕ್ತಿಯಿದ್ದು ಪುಸ್ತಕಗಳು ಹಾಗೂ ಪತ್ರಿಕೆಗಳನ್ನು ಓದುವುದು ಆತನ ಪ್ರಿಯ ಹವ್ಯಾಸವಾಗಿತ್ತು. ಹೆಂಗಸರು ತಮ್ಮ ಬೆಡಗು ಬಿನ್ನಾಣಗಳಿಂದ ಆತನನ್ನು ಆಕರ್ಷಿಸಲು ಪ್ರಯತ್ನಿಸುತ್ತಿದ್ದರು. ಆದರೆ ವುಲ್ಫ್‌ಬೆರ್‌ಗೆ ಒಬ್ಬನೇ ದೇವರಿದ್ದಂತೆ, ಒಬ್ಬಳೇ ಹೆಂಡತಿ. ಬೇರೆಯ ಹೆಂಗಸರಲ್ಲಿ ಸಿಲಿಯಾಳಲ್ಲಿಲ್ಲದ ಏನನ್ನು ಆತ ಕಾಣಬಹುದಿತ್ತು ? ಚೆಲ್ಲು ಹೆಂಗಸರ ಬಗ್ಗೆ ಆತನಿಗೆ ತಿರಸ್ಕಾರವಿತ್ತು. ಅವನೆಂದೂ ವೇಶ್ಯಾಗೃಹದ ಹೊಸ್ತಿಲು ತುಳಿದವನಲ್ಲ, ಮದ್ಯ ಕುಡಿದವನಲ್ಲ. ಆತನಿಗೆ ವಿಧೇಯಳಾದ ಹೆಂಡತಿ ಹಾಗೂ ಉತ್ತಮ ರೀತಿಯಲ್ಲಿ ಬೆಳೆಸಿದ ಇಬ್ಬರು ಹೆಣ್ಣು ಮಕ್ಕಳಿದ್ದರು. ಕಾಜ್ಲೋವಿನಲ್ಲಿ ಚಿಕ್ಕ ತೋಟವಿದ್ದ ಒಂದು ಮನೆಯಿತ್ತು. ಆತನ ಮಕ್ಕಳು ಸ್ಕೂಲಿಗೆ ಹೋಗುತ್ತಿದ್ದರು. ವುಲ್ಫ್‌ಬೆರ್ ಪ್ಯೂರಿಮ್ ಹಬ್ಬದಂದು ಉಪಾಧ್ಯಾಯರಿಗೆ ಉಡುಗೊರೆಗಳನ್ನು ಕಳಿಸಿಕೊಡುತ್ತಿದ್ದ. ಪಾಸೋವರ್ ಹಬ್ಬಕ್ಕೆ ಮುನ್ನ ಜನಾಂಗದ ಹಿರಿಯರು 'ಬಡವರ ನಿಧಿ'ಗಾಗಿ ಹಣ ಸಂಗ್ರಹಿಸಲು ಈತನ ಬಳಿ ಬರುತ್ತಿದ್ದರು.

ಈ ಸಾರಿ ಮನೆಗೆ ಬರುವಾಗ ವುಲ್ಫ್‌ಬೆರ್ ಸಿಲಿಯಾಳಿಗಾಗಿ ಲುಬ್ಲಿನ್ ಆಭರಣಕಾರರಿಂದ ಒಂದು ಜೊತೆ ಸೊಗಸಾದ 'ಕಿವಿಯುಂಗುರ'ಗಳನ್ನೂ ಮಕ್ಕಳು ಮಾಶಾ ಮತ್ತು ಅಂಕಾರಿಗಾಗಿ ಚಿನ್ನದ ಪದಕಗಳ ಹಾರಗಳನ್ನೂ ತಂದಿದ್ದನು. ಆತ ರೆವಿಜ್‌ವರೆಗೂ ರೈಲಿನಲ್ಲಿ ಬಂದು. ಅಲ್ಲಿಂದ ವ್ಯಾಗನ್ ಗಾಡಿಯೊಂದರಲ್ಲಿ ಡ್ರೈವರನ ಸಂಗಡ ಕುಳಿತು ಬಂದಿದ್ದನು. ವುಲ್ಫ್‌ಬೆರ್‌ಗೆ ಅವನ ಸಹಪ್ರಯಾಣಿಕರು ಒಳಗೆ ಕುಳಿತು ಹೆಂಗಸರೊಡನೆ ಆಡುತ್ತಿದ್ದ ತಮಾಷೆಯ, ದ್ವಂದ್ವಾರ್ಥದ ಮಾತುಗಳಲ್ಲಿ ಆಸಕ್ತಿಯಿರಲಿಲ್ಲ. ಅವರು ಈತನನ್ನು ತಮ್ಮ ಮಾತುಕತೆಗೆ ಎಳೆಯಲು ಪ್ರಯತ್ನಿಸಿದರೂ ಈತ ಅವರೊಡನೆ ಸೇರದೆ ದೂರವುಳಿದು ನಿಶ್ಶಬ್ದ ಏಕಾಂತದಲ್ಲಿ ನೀಲಿಯಾಕಾಶದ ತಾರೆಗಳನ್ನೂ, ಎತ್ತರೆತ್ತರದ ಮರಗಳನ್ನೂ ನೋಡುತ್ತಾ ಹಕ್ಕಿಗಳಿಂಚರವನ್ನು ಆಲಿಸುವುದರಲ್ಲಿ ಸಂತೋಷಪಡುತ್ತಿದ್ದ. ಹೊಲ

ಗಳಲ್ಲಿ ಮಂಜು ಕರಗುತ್ತಿತ್ತು. ಹಿಂಗಾರು ಬೆಳೆ ಸಮೃದ್ಧವಾಗಿ ಬೆಳೆದಿತ್ತು. ಸೂರ್ಯ ಹೊಂಬಣ್ಣದಿಂದ ಕೂಡಿದ್ದು ತೂಗಾಡುವ ಛತ್ರಿಚಿತ್ರದಂತೆ ಕಾಣಿಸುತ್ತಿದ್ದ. ಅಲ್ಲಲ್ಲಿ ಹುಲ್ಲುಗಾವಲಿನಲ್ಲಿ ಹಸುರು ಮೇಯುತ್ತಿದ್ದ ಹಸುಗಳು ಕಾಣಿಸುತ್ತಿದ್ದುವು. ದಟ್ಟ ಮರಗಳ ನಡುವಿನಿಂದ ಬಿಸಿಗಾಳಿ ಬೀಸುತ್ತಿದ್ದು, ಆದರಾಚೆ ಬೇಸಿಗೆಯ ಬಯಲಿರಬಹುದೆಂಬ ಭಾವನೆ ಬರುತ್ತಿತ್ತು. ಒಮ್ಮೊಮ್ಮೆ ಮೊಲವೋ, ಜಿಂಕೆಯೋ ಕಾಡಿನಂಚಿನಲ್ಲಿ ಕಂಡು ಮರೆಯಾಗುತ್ತಿತ್ತು : ಅಥವಾ ಜೀವಂತ ಕಲ್ಲಿನಂತೆ ಕಾಣುತ್ತಿದ್ದ ಕಡಲಾಮೆ ರಸ್ತೆಯ ಆ ಬದಿಯಿಂದ ಈ ಬದಿಗೆ ನಿಧಾನ ಸಾಗುತ್ತಿದ್ದ ದೃಶ್ಯ ಕಾಣುತ್ತಿತ್ತು.

ವುಲ್ಫ್‌ಬೆರ್ ಪ್ರತಿವರ್ಷ ನಿಯಮವೆಂಬಂತೆ ವರ್ಷಕ್ಕೆ ನಾಲ್ಕು ಬಾರಿ ಮನೆ ಬಿಟ್ಟು ಹೋಗುತ್ತಿದ್ದ. ತನ್ನ ಕೆಲಸ ಸುಗಮವಾಗಿದ್ದಲ್ಲಿ ಆತ ಆರು ವಾರಗಳಿಗಿಂತ ಜಾಸ್ತಿ ಎಂದೂ ಹೊರಗೆ ನಿಲ್ಲುತ್ತಿರಲಿಲ್ಲ. ಅವನು ಪ್ರತಿವರ್ಷ ಅದೇ ಜಾತ್ರೆಗಳಿಗೆ ಹೋಗುತ್ತಿದ್ದ. ಕಾಜ್ಲೋವಿನಲ್ಲಿ ವುಲ್ಫ್‌ಬೆರ್‌ನ ಉದ್ಯೋಗವೇನೆಂಬುದು ಎಲ್ಲರಿಗೂ ಗೊತ್ತಿತ್ತು. ಆದರೆ ಆತ ಎಂದೂ. ಅಲ್ಲಿ ಯಾರ ಬಳಿಯೂ ಕದ್ದಿರಲಿಲ್ಲ. ಅವನಿಲ್ಲದಿರುವಾಗ ಅಲ್ಲಿನ ವರ್ತಕರು ಸಿಲಿಯಾಳಿಗೆ ಸಾಲವನ್ನು ಕೊಡುತ್ತಿದ್ದರು. ಆ ರೀತಿಯ ಸಾಲವೆಲ್ಲ ಒಂದು ಪುಸ್ತಕದಲ್ಲಿ ಬರೆಯಲ್ಪಡುತ್ತಿದ್ದು. ವುಲ್ಫ್‌ಬೆರ್ ಹಿಂತಿರುಗಿದ ತಕ್ಷಣ ಚಿಕ್ಕಾಸೂ ಇಲ್ಲದಂತೆ ಎಲ್ಲವನ್ನೂ ತೀರಿಸಿಬಿಡುತ್ತಿದ್ದ. ಒಮ್ಮೆ ವುಲ್ಫ್‌ಬೆರ್ ಯಾನೋ ಜೈಲಿನಲ್ಲಿ ಅನೇಕ ತಿಂಗಳುಗಳವರೆಗೆ ಶಿಕ್ಷೆ ಅನುಭವಿಸಬೇಕಾಗಿ ಬಂದಿತು. ಆಗಲೂ ಕಾಜ್ಲೋವಿನ ವರ್ತಕರು ಸಿಲಿಯಾಳನ್ನು ನಿರ್ಲಕ್ಷಿಸಲಿಲ್ಲ. ನೂರಾರು ರೂಬೆಲ್‌ಗಳವರೆಗೆ ಆಕೆಗೆ ಸಾಲ ನೀಡಿದ್ದರು. ವರ್ತಕರು ತೂಕದಲ್ಲಿ ಕಡಿಮೆ ಮಾಡುತ್ತಾರೆಂದೂ ಸಾಲದ ಪುಸ್ತಕದಲ್ಲಿ ಹೆಚ್ಚು ಬರೆಯುತ್ತಾರೆಂದೂ ಅನೇಕ ವೇಳೆ ಸಿಲಿಯಾ ವುಲ್ಫ್‌ಬೆರ್‌ನ ಬಳಿ ದೂರುತ್ತಿದ್ದಳು. ಆದರೆ ಆತ ಎಂದೂ ಈ ವಿಷಯದಲ್ಲಿ ವರ್ತಕರ ಜೊತೆ ವಾದಕ್ಕಿಳಿಯುತ್ತಿರಲಿಲ್ಲ. ಪ್ರಪಂಚವಿರುವುದೇ ಹೀಗಲ್ಲವೇ !

ಎಂದಿನಂತೆ ವುಲ್ಫ್‌ಬೆರ್ ಸಿಲಿಯಾ ಹಾಗೂ ಮಕ್ಕಳನ್ನು ನೋಡುವ ಕಾತುರದಿಂದ ಕಾಜ್ಲೋಗೆ ಬೇಗ ಹಿಂತಿರುಗಿದ. ಸಿಲಿಯಾ ತಯಾರಿಸುತ್ತಿದ್ದ ತಿಂಡಿಗಳು ದಾರಿಯಲ್ಲೆಲ್ಲೂ ಸಿಗುತ್ತಿರಲಿಲ್ಲ. ಯಾವುದೇ ಉತ್ತಮ ಹೋಟೆಲಿನಲ್ಲಿರಬಹುದಾದ ಹಾಸಿಗೆಗಿಂತ ಮೆತ್ತನೆಯ ಸೊಗಸಾದ ಹಾಸಿಗೆ ಮನೆಯಲ್ಲಿ

ಅವನಿಗಾಗಿ ಕಾದಿರುತ್ತಿತ್ತು. ಸಿಲಿಯಾ ಸಿದ್ಧಪಡಿಸುವ ಹಾಸಿಗೆ ಅತ್ಯಂತ ಶುಚಿಯಾಗಿದ್ದು, ಸುಂದರವಾದ ದಿಂಬಿನ ಹೊದಿಕೆಗಳಿಂದ ಅಲಂಕೃತವಾಗಿ, ರೇಷ್ಮೆಯಂತೆ ನುಣುಪಾಗಿದ್ದು ಪರಿಮಳದಿಂದ ಕೂಡಿರುತ್ತಿತ್ತು. ಸಿಲಿಯಾ ಅವನ ಬಳಿಗೆ ಬರುವಾಗ ಮುಖ ತೊಳೆದು, ಹೆರಳು ಹಾಕಿಕೊಂಡು, ಸೊಗಸಾದ ನೈಟ್‌ಗೌನ್‌ನೊಂದಿಗೆ ನಗುನಗುತ್ತಾ ಬರುತ್ತಿದ್ದಳು. ಬಂದು, ನವವಧುವಿನ ಉತ್ಸಾಹದಲ್ಲಿ ಆತನನ್ನು ಮುದ್ದಿಸಿ, ಕಿವಿಯಲ್ಲಿ ಅನೇಕ ಸಿಹಿಮಾತುಗಳ ಗುಟ್ಟುಗಳನ್ನು ಹೇಳುತ್ತಿದ್ದಳು. ಹುಡುಗಿಯರು ದೊಡ್ಡವರಾಗುತ್ತಿದ್ದರು. ಒಬ್ಬಳಿಗೆ ಹತ್ತು ವರ್ಷ, ಮತ್ತೊಬ್ಬಳಿಗೆ ಹನ್ನೊಂದು. ಆದರೂ ಪುಟ್ಟಮಕ್ಕಳಂತೆ ಅವರು ವುಲ್ಫ್‌ಬಿರ್‌ನ ಮೇಲೆ ಬಿದ್ದು, ಮುತ್ತುಗಳಿಂದ ಅವನನ್ನು ಮುಚ್ಚಿ, ತಮ್ಮ ಸ್ಕೂಲ್ ಪುಸ್ತಕಗಳು, ಮಾರ್ಕ್ಸ್ ಕಾರ್ಡ್, ಡ್ರಾಯಿಂಗ್ ಪುಸ್ತಕವನ್ನು ಖುಷಿಯಿಂದ ತೋರಿಸುತ್ತಿದ್ದರು. ಅವರು ಶ್ರೀಮಂತರ ಮಕ್ಕಳಂತೆ ತಲೆಪಿನ್ನು, ಹೊಳೆಯುವ ಶೂ, ಇಸ್ತ್ರಿ ಮಾಡಿದ ಬಟ್ಟೆ, ರೇಷ್ಮೆಯ ಮೇಲು ಹೊದಿಕೆ ತೊಡುತ್ತಿದ್ದರು. ಯಿದ್ದಿಷ್ ಮಾತ್ರವಲ್ಲದೆ, ರಷ್ಯನ್ ಹಾಗೂ ಪೋಲಿಷ್ ಭಾಷೆಗಳಲ್ಲೂ ಅವರು ಮಾತನಾಡುತ್ತಿದ್ದರು. ವುಲ್ಫ್‌ಬಿರ್ ಎಂದೂ ಕೇಳಿರದ ಹೊರದೇಶಗಳ ಬಗ್ಗೆ, ನಗರಗಳ ಬಗ್ಗೆ ಅವರು ಚರ್ಚಿಸುತ್ತಿದ್ದರು. ಇತಿಹಾಸದ ರಾಜರ ಕತೆಗಳನ್ನು ಹೇಳುತ್ತಿದ್ದರು. ಪದ್ಯಗಳನ್ನು ಹಾಡುತ್ತಿದ್ದರು. ಅವರ ಆ ಪುಟ್ಟ ತಲೆಯಲ್ಲಿ ಇಷ್ಟೆಲ್ಲ ಸಂಗತಿಗಳು ಹೇಗೆ ಹುದುಗಿವೆಯೆಂದು ವುಲ್ಫ್‌ಬಿರ್‌ಗೆ ಆಶ್ಚರ್ಯವಾಗುತ್ತಿತ್ತು. ದಾಖಲೆಗಳಲ್ಲಿ ಅವರ ತಂದೆಯ ಉದ್ಯೋಗವನ್ನು ಎಂದೂ ಉಲ್ಲೇಖಿಸುತ್ತಿರಲಿಲ್ಲ. 'ಟ್ರಾವೆಲಿಂಗ್ ಸೇಲ್ಸ್‌ಮನ್' ಎಂದೇ ಅವನನ್ನು ಪರಿಗಣಿಸಲಾಗುತ್ತಿತ್ತು. ಅವನ ಮನೆ ಚರ್ಚ್ ಬೀದಿಯಲ್ಲಿ ಸೇತುವೆಗೆ ಸಮೀಪದಲ್ಲಿತ್ತು. ಗೌರವಾನ್ವಿತ ನೆರೆಹೊರೆಯವರಿಗೆ ಅವನು ಏನು ಮಾಡುತ್ತಾನೆಂದು ತಿಳಿದಿರಲಿಲ್ಲ ಅಥವಾ ತಿಳಿದಿದ್ದರೂ ಆ ಬಗ್ಗೆ ಮಾತನಾಡುತ್ತಿರಲಿಲ್ಲ. ಕ್ರಿಸ್‌ಮಸ್ ಮತ್ತು ಈಸ್ಟರ್ ಹಬ್ಬಗಳಂದು ಆತ ಅವರೆಲ್ಲರಿಗೂ ಉಡುಗೊರೆ ಕಳಿಸುತ್ತಿದ್ದ.

ವುಲ್ಫ್‌ಬಿರ್‌ನನ್ನು ಕರೆದುಕೊಂಡು ಬಂದ ವ್ಯಾಗನ್ ಗಾಡಿ ಮಾರುಕಟ್ಟೆಯಲ್ಲಿ ನಿಂತಿತು. ಪ್ಯೂರಿಮ್ ಹಬ್ಬ ಕಳೆದು ಬಹಳ ದಿನಗಳಾಗಿರದಿದ್ದರೂ ಆಗಲೇ ಬಿಸಿಲು ಪಾಸೋವರ್‌ನಲ್ಲಿ ಸುಡುವಷ್ಟು ತೀಕ್ಷ್ಣವಾಗಿತ್ತು. ಮರಳಿನ ನಡುವೆ ಚಿನ್ನದ ಕಣಗಳು ಹೊಳೆಯುತ್ತಿದ್ದುವು. ಕುದುರೆ ಲದ್ದಿಯಿಂದ ಹಕ್ಕಿಗಳು ಕಾಳು

ಹೆಕ್ಕಿಕೊಂಡು ತಿನ್ನುತ್ತಿದ್ದವು. ಹಳ್ಳಿಯ ಹೆಂಗಸರು ಕೊರಕಲು ದಾರಿಯಲ್ಲಿ ಬರಿಗಾಲಿನಲ್ಲಿ ನಡೆಯುತ್ತ ಮೂಲಂಗಿ, ಕೋಸು, ಈರುಳ್ಳಿ ಮುಂತಾದುವನ್ನು ಮಾರುತ್ತಿದ್ದರು. ವುಲ್ಫ್‌ಬೆರ್ ಗಾಡಿಯವನಿಗೆ ಹಣ ನೀಡುವಾಗ, ನಗರಗಳಲ್ಲಿಯಂತೆ 'ಬೀರ್ ಕುಡಿ' ಎಂದು ಹೇಳಿ ಇಪ್ಪತ್ತು ನಾಣ್ಯಗಳನ್ನು ಹೆಚ್ಚು ನೀಡಿದನು. ತಾಮ್ರದ ಚಿತ್ತಾರಗಳಿದ್ದ ತನ್ನ ಚರ್ಮದ ಚೀಲವನ್ನು ಎತ್ತಿಕೊಂಡು ವುಲ್ಫ್‌ಬೆರ್ ಚರ್ಚ್ ಬೀದಿಯ ಕಡೆ ಹೆಜ್ಜೆ ಹಾಕಿದನು. ಅಂಗಡಿಯವರು ತಮ್ಮ ಕಣ್ಣುಗಳಿಂದಲೇ ಅವನನ್ನು ಹಿಂಬಾಲಿಸಿದರು. ಹುಡುಗಿಯರು ತಮ್ಮ ಮನೆಗಳ ಕಿಟಕಿಯ ಪರದೆ ಸರಿಸಿ ಗಾಜುಗಳ ಮೇಲಿನ ಮಂಜು ಒರೆಸಿದರು. ಹುಚ್ಚು ಜಕೇಲ ಎಲ್ಲಿಂದಲೋ ಓಡಿಬಂದ. ವುಲ್ಫ್‌ಬೆರ್ ಕೆಲವು ನಾಣ್ಯಗಳನ್ನು ಆತನಿಗೆ ನೀಡಿದ. ಮಾಂಸದಂಗಡಿಯ ಬಳಿಯ ನಾಯಿಗಳೂ ಸಹ ವುಲ್ಫ್‌ಬೆರ್‌ನನ್ನು ನೋಡಿ ಬಾಲವಲ್ಲಾಡಿಸಿದುವು.

ವುಲ್ಫ್‌ಬೆರ್, ಸದ್ಯ ಪಾಸೊವರ್ ಹಬ್ಬದ ವೇಳೆಗೆ ಮನೆಗೆ ಬರುತ್ತಿದ್ದಾನೆ. ಸಿಲಿಯಾ ಸೂಪ್ ತಯಾರಿಸುತ್ತಾಳೆ. ಕರಿದ ಮೀನುಗಳ ವಿವಿಧ ಬಗೆಯ ತಿಂಡಿ ಮಾಡುತ್ತಾಳೆ. ಸೊಗಸಾದ ಮಾಂಸದ ಊಟ ಸಿದ್ಧಪಡಿಸುತ್ತಾಳೆ. ವುಲ್ಫ್‌ಬೆರ್ ಈ ಸಾರಿ ಹೆಚ್ಚು ಹಣವನ್ನು ತಂದಿರುವುದರಿಂದ ಮನೆಯಲ್ಲಿ ಎಲ್ಲರಿಗೂ ಹೊಸ ಬಟ್ಟೆ ತರಬಹುದು. ಅವನು ನಡೆಸುತ್ತಿದ್ದಂಥ 'ವ್ಯಾಪಾರ'ದಲ್ಲಿ ಬಂದ ಹಣವನ್ನೆಲ್ಲಾ ಉಳಿಸದೆ ಒಂದೇ ಸಾರಿ ಖರ್ಚು ಮಾಡಿ ಬಿಡುವುದೇ ಒಳ್ಳೆಯದು. ವುಲ್ಫ್‌ಬೆರ್ ಪರಿಚಿತ ಪರಿಮಳದಿಂದ ಇದ್ದಕ್ಕಿದ್ದಂತೆ ನಿಂತುಬಿಟ್ಟ. ಆತ ಮಾಟ್ಲೊ ಬೇಕರಿಯ ಬಳಿ ಬಂದಿದ್ದ. ಕಿಟಕಿಯ ಮೂಲಕ ಒಳಗೆ ಕಣ್ಣಾಡಿಸಿದ. ತಲೆಗೆ ಕರವಸ್ತ್ರ ಸುತ್ತಿ, ಬಿಳಿಯ ಏಪ್ರನ್ ಧರಿಸಿದ್ದ ಕೆಂಪುಕೆನ್ನೆಯ ಹೆಂಗಸರು ಹಿಟ್ಟು ನಾದುತ್ತಿದ್ದರು. ಒಬ್ಬಳು ನೀರು ಸುರಿಯುತ್ತಿದ್ದಳು, ಇನ್ನೊಬ್ಬಳು ಕಲಸುತ್ತಿದ್ದಳು, ಮತ್ತೊಬ್ಬಳು ಪರಿಮಳ ಸಿಂಪಡಿಸಿ ಹದಗೊಳಿಸುತ್ತಿದ್ದಳು. ಒಲೆಯ ಬಳಿ ನಿಂತಿದ್ದ ಒಬ್ಬ ಈಗಾಗಲೇ ಬೆಂದಿರುವಂಥವನ್ನು ತೆಗೆದಿರಿಸುತ್ತಿದ್ದ. ಅವನ ಬಳಿಯೇ ಕೆನ್ನೆಯ ಮೇಲೆ ಕೂದಲು ಬಿಟ್ಟು ಟೋಪಿ ಹಾಕಿಕೊಂಡಿದ್ದ ಮತ್ತೊಬ್ಬ ನಿಂತು ಮೇಲುಸ್ತುವಾರಿ ನಡೆಸುತ್ತಿದ್ದ. ವುಲ್ಫ್‌ಬೆರ್‌ಗೆ ತಕ್ಷಣ ತನ್ನ ತಂದೆ ತಾಯಿಯರ ನೆನಪಾಯಿತು. ಅವರೀಗ ಎಲ್ಲಿರಬಹುದು ? ಬಹುಶಃ ಸ್ವರ್ಗದಲ್ಲಿ ! ಅವರ ಮಗ ಬದುಕಲು ಸರಿಯಾದ ದಾರಿಯನ್ನು ಆರಿಸಿಕೊಂಡಿರ

ಇಲ್ಲ ನಿಜ. ಆದರೆ ಅವರಿಗೆ ಸುಂದರ ಗೋರಿಗಳನ್ನು ಕಟ್ಟಿಸಿದ್ದ. ಪ್ರತಿ ವರ್ಷ ಮೇಣದ ಬತ್ತಿ ಹಚ್ಚಿ, ಕ್ಯಾಡಿಷ್ ಓದಿ, ಅವರ ನೆನಪಿನಲ್ಲಿ ಒಬ್ಬನಿಗೆ ಹಣ ನೀಡಿ ಮಿಶ್ನಾಗ್ರಂಥ ಓದಿಸುತ್ತಿದ್ದ. ದೇವರು ಪಾಪಿಗಳಿಗೆ ಕರುಣಾಮಯಿ ! ಹಾಗಿಲ್ಲದಿದ್ದಲ್ಲಿ ಬಹಳ ಹಿಂದೆಯೇ ಎರಡನೆಯ ಪ್ರಳಯದ ಬಿರುಗಾಳಿ ಬೀಸಬೇಕಿತ್ತು.

೨

ವುಲ್ಫ್‌ಬೆರ್ ತಾನು ವಾಸಿಸುತ್ತಿದ್ದ ಚರ್ಚ್ ಬೀದಿಗೆ ಬರುತ್ತಿದ್ದಂತೆಯೇ ಒಂದು ರೀತಿಯ ಭಯ ಆವರಿಸಿತು. ಮನುಷ್ಯನನ್ನು ಮೀರಿದ ಶಕ್ತಿಯೊಂದು ಆತನನ್ನು ಎಚ್ಚರಿಸಿದಂತಾಯಿತು. 'ಪಾಸೋವರ್ ಹಬ್ಬ ಇನ್ನೂ ಮುಗಿದಿಲ್ಲ, ಹಬ್ಬದ ಸಂತೋಷವನ್ನು ನೀನಿನ್ನೂ ಅನುಭವಿಸಿಲ್ಲ' ಎಂದು ಅವನ ಒಳದನಿ ಹೇಳಿದಂತಾಯಿತು. ವುಲ್ಫ್‌ಬೆರ್ ನಿಂತಲ್ಲೇ ನಿಂತುಬಿಟ್ಟ. ಸಿಲಿಯಾ ಚೆನ್ನಾಗಿರುವಳು ತಾನೇ ? ಮಕ್ಕಳಿಗೆ ಏನಾದರೂ ಆಯಿತೆ ? ತಾನು ಜೈಲಿಗೆ ಹೋಗುವ ಸಂಭವವೇನಾದರೂ ಇದೆಯೇ ? ಆದರೆ ಹೇಗೆ ? ಅಂತಹ ಸುಳುಹುಗಳನ್ನೇನನ್ನೂ ಆತ ಬಿಟ್ಟು ಬಂದಿರಲಿಲ್ಲ. ಮನಸ್ಸಿನ ಸಂದೇಹವನ್ನು ದೂರ ತಳ್ಳುತ್ತಾ ಎರಡೂ ಬದಿಗೆ ಅಡಗಿಕೊಂಡಂತಿದ್ದ ಸಾಲುಮನೆಗಳ ನಡುವೆ ವುಲ್ಫ್‌ಬೆರ್ ಚುರುಕಾಗಿ ನಡೆಯತೊಡಗಿದ. ಕಳೆದ ವರ್ಷ ಸೂರ್ಯಕಾಂತಿಯ ಗಿಡದ ಕಾಂಡ ಮಂಜಿನಿಂದ ಮುಚ್ಚಿಕೊಂಡಿದ್ದುದು. ಮಂಜು ಕರಗಿದಂತೆ ಮುಳ್ಳಿನಂತೆ ಮೇಲೆದ್ದು ನಿಂತಿತ್ತು. ಹಾರಿ ಹೋಗಿದ್ದ ಹಕ್ಕಿಗಳು ಹಿಂತಿರುಗಿ ಬಂದು ಮತ್ತೆ ಮರ್ಚಿನ-ಸ್ಕಿಯ ಚಾವಣಿಯ ಮೇಲೆ ಕಳೆದ ವರ್ಷ ಕಟ್ಟಿದ್ದ ಗೂಡುಗಳನ್ನು ಸರಿಪಡಿಸುತ್ತಿದ್ದವು. ನಾಯಿ ಕೊಡೆಯಂತಹ ಮಾಳಿಗೆಯ ತನ್ನ ಮನೆಯನ್ನು ಆತುರಾತುರವಾಗಿ ವುಲ್ಫ್‌ಬೆರ್ ತಲುಪಿದ. ಚಿಮಣಿಯಿಂದ ಹೊಗೆ ಸುರುಳಿಯಾಗಿ ಮೇಲಕ್ಕೇರುತ್ತಿತ್ತು. ಮನೆಯ ಮುಂದಿನ ಕಿಟಕಿಯ ಬಾಗಿಲಿನ ಮೇಲೆ ಮಧ್ಯಾಹ್ನದ ಸೂರ್ಯನ ಬಿಸಿಲು ಪ್ರತಿಫಲಿಸುತ್ತಿತ್ತು. ಸದ್ಯ ! ಏನೂ ಆಗಿಲ್ಲವೆಂದುಕೊಂಡ ವುಲ್ಫ್‌ಬೆರ್ ನಿಟ್ಟುಸಿರುಬಿಟ್ಟ. ಬಾಗಿಲು ತೆಗೆದ. ಒಳಗಡೆ ಇಡೀ ಸಂಸಾರ ಹಾಯಾಗಿತ್ತು. ಸಿಲಿಯಾ ಅಡಿಗೆ ಮನೆಯಲ್ಲಿ ಒಲೆಯ ಬಳಿ ನಿಂತಿದ್ದಳು. ಸ್ಕರ್ಟ್ ತೊಟ್ಟು ನೀಟಾಗಿ ತಲೆ ಬಾಚಿ ಮೇಲೆ ಗಂಟು ಹಾಕಿದ್ದಳು. ಅವಳದು ಎಳಸಾದ

ದುಂಡು ಮುಖ. ಸಣ್ಣ ನಡು. ಕೆಂಪು ಚಪ್ಪಲಿ ತೊಟ್ಟಿದ್ದಳು. ಅವಳ ಕಾಲಿನ ಮೀನಖಂಡಗಳು ಮೇಲೆ ದಪ್ಪವಾಗಿದ್ದು ಕ್ರಮೇಣ ಸಣ್ಣಗಿದ್ದುವು. ಅವಳು ಎಂದಿಗಿಂತಲೂ ಇಂದು ಹೆಚ್ಚು ಸುಂದರಿಯಾಗಿ ಕಾಣುತ್ತಿದ್ದಳು. ಮಕ್ಕಳು ಸ್ಟೂಲಿನ ಮೇಲೆ ಕುಳಿತು ಏನೋ ಆಟವಾಡುತ್ತಿದ್ದರು.

ವುಲ್ಫ್‌ಬೆರ್ ಒಳಗೆ ಬಂದ ತಕ್ಷಣ ಎಲ್ಲರೂ ಕೂಗುತ್ತಾ ಅವನ ಬಳಿ ಓಡಿಬಂದರು. ಸಿಲಿಯಾ ಉತ್ಸಾಹದಲ್ಲಿ ಸ್ಟೌವ್ ಮೇಲಿದ್ದ ಪಾತ್ರೆಯ ಮೇಲೆ ಇನ್ನೇನು ಬೀಳುವುದರಲ್ಲಿದ್ದಳು. ಮಕ್ಕಳು ಅವನಿಗೆ ಜೋತುಬಿದ್ದು, ಮುತ್ತಿನ ಮಳೆಗರೆದರು. ವುಲ್ಫ್‌ಬೆರ್ ಸಿಲಿಯಾಳ ತುಟಿಗಳನ್ನು ಚುಂಬಿಸಿದ ಕ್ಷಣವೇ ಆಸೆಯು ಮಡುವಾಗಿ ಬಿಟ್ಟ. ಅವನು ಅವಳನ್ನು ಮತ್ತೆ ಮತ್ತೆ ಚುಂಬಿಸಿದ. ಮಾಶಾ ಮತ್ತು ಅಂಕಾ ಅವನಿಗಾಗಿ ಗುದ್ದಾಡಿದರು. ಸ್ವಲ್ಪ ಹೊತ್ತಿನ ನಂತರ ಆತ ಉಡುಗೊರೆಗಳನ್ನು ನೀಡಲು ತನ್ನ ಚರ್ಮದ ಚೀಲವನ್ನು ತೆಗೆದ. ಎಲ್ಲರೂ ಮತ್ತೊಮ್ಮೆ ಬೊಬ್ಬೆ ಹಾಕಿದರು. ವುಲ್ಫ್‌ಬೆರ್ ಗಿಳಿಯನ್ನು ಮಾತನಾಡಿಸಲು ಹೋದಾಗ ಗೂಡಿನಲ್ಲಿ ತುದಿಗಾಲಿನಲ್ಲಿ ನಿಂತಿದ್ದ ಅದು ಸಂತೋಷದಿಂದ ರೆಕ್ಕೆಗಳನ್ನು ಬಡಿಯುತ್ತಾ ಹಾರಿ ಬಂದು ಅವನ ಹೆಗಲ ಮೇಲೆ ಕುಳಿತುಕೊಂಡಿತು. ವುಲ್ಫ್‌ಬೆರ್ ಅದರ ಕೊಕ್ಕಿಗೆ ಮುತ್ತನ್ನಿತ್ತು, ಲುಬ್ಲಿನ್‌ನಿಂದ ಗಿಳಿಗಾಗಿಯೇ ತಂದಿದ್ದ ಕಾಳುಗಳನ್ನು ನೀಡಿದ. ಗಿಳಿಗೆ ಹಳೆಯ ರೆಕ್ಕೆಗಳು ಉದುರಿ ಹೋಗಿ ಹೊಸ ರೆಕ್ಕೆಗಳು ಮೂಡಿದ್ದವು.

ಪಪ್ಪ ಪಪ್ಪ ಪಪ್ಪ ಎಂದು ಗಿಳಿ ಕೂಗಿತು.

ನಿನಗೆ ಪಪ್ಪನನ್ನು ಕಂಡರೆ ಇಷ್ಟವಾ ?

ಇಷ್ಟ ಇಷ್ಟ ಇಷ್ಟ.

ಹೆದರಿಕೆಗೆ ಕಾರಣವೇ ಇರಲಿಲ್ಲ. ವುಲ್ಫ್‌ಬೆರ್ ಮನೆಯನ್ನೆಲ್ಲಾ ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿದ. ನೆಲ, ಕಿಟಕಿ, ಬಾಗಿಲು, ಗೋಡೆ–ಎಲ್ಲವೂ ಹೊಳೆಯುತ್ತಿದ್ದವು. ಪಾಸೋವರ್ ಹಬ್ಬಕ್ಕೆ ಮುನ್ನ ಗೋಡೆಗಳಿಗೆಲ್ಲ ಸುಣ್ಣ ಹೊಡೆಸುವುದು ರೂಢಿ. ಎಲ್ಲೂ ಕಲೆಗಳಿರಲಿಲ್ಲ. 'ಜಗತ್ತಿನಲ್ಲಿ ಇವಳಿಗಿಂತ ಒಳ್ಳೆಯ ಹೆಂಡತಿ ಇರಲಾರಳು' ಎಂದು ವುಲ್ಫ್‌ಬೆರ್ ಗಟ್ಟಿಯಾಗಿಯೇ ಹೇಳಿದ. ಬೆಳಗ್ಗೆ ವ್ಯಾಗನ್ ಬಂಡಿಯಲ್ಲಿ ಬರುವಾಗ ಅವನಿಗೆ ಆಯಾಸವೆನ್ನಿಸಿತ್ತು. ಕಷ್ಟಪಟ್ಟು ಕಣ್ಣು ತೆರೆದು ಕುಳಿತಿದ್ದ. ಆದರೆ ಈಗ ಅವನ ಮನಸ್ಸು ಉಲ್ಲಸಿತಗೊಂಡಿತ್ತು;

ದೇಹದ ತುಂಬ ಲವಲವಿಕೆ ಮೂಡಿತ್ತು. ಸಿಲಿಯಾ ಅವನಿಗೆ ಉಪಾಹಾರ ನೀಡಿದಳು.

ರೂಮಿನಲ್ಲಿ ಅವರಿಬ್ಬರೇ ಇದ್ದಾಗ ಸಿಲಿಯಾ ತನ್ನ ಕಣ್ಣುಗಳಲ್ಲಿ ಮಿಂಚು ತುಳುಕಿಸುತ್ತಾ ಕೇಳಿದಳು : ವ್ಯಾಪಾರ ಹೇಗಿದೆ ?'

'ನೀನು ನನ್ನ ಜೊತೆಯಿರುವವರೆಗೆ ಭಯವಿಲ್ಲ.'

ವುಲ್ಫ್‌ಬೆರ್‌ಗೆ ತನ್ನ ಕೆಲಸದ ಬಗ್ಗೆ ನಾಚಿಕೆಯಿತ್ತು. ಆತ ಹೊರಗೆ ಹೋಗಿ ಬಂದಾಗ ಸಿಲಿಯಾ ಎಂದೂ ಆತನ ಕೆಲಸದ ಬಗ್ಗೆಯಾಗಲೀ, ಆತ ಏನು ಮಾಡು ತ್ತಾನೆಂದಾಗಲೀ ಕೇಳುತ್ತಿರಲಿಲ್ಲ. ಅವಳು ಇದನ್ನು ಒಂದು ನಿಯಮವೆಂಬಂತೆ ಪಾಲಿಸುತ್ತಿದ್ದಳು. ಇದರಿಂದಾಗಿ ಅವನ ಬದುಕಿನಲ್ಲಿ ಒಂದು ರೀತಿಯ ಸಮೃದ್ಧಿ ಯಿತ್ತು. ವುಲ್ಫ್‌ಬೆರ್ ಈಗ ಸಿಲಿಯಾ ಹಾಗೂ ಮಕ್ಕಳ ಬಟ್ಟೆಯ ಬಗ್ಗೆ ಮಾತು ತೆಗೆದ. ಪಾಸೋವರ್ ಹಬ್ಬ ಇಷ್ಟು ಹತ್ತಿರವಿರುವಾಗ ಯಾವ ದರ್ಜಿ ಬಟ್ಟೆ ಹೊಲಿದು ಕೊಡುತ್ತಾನೆ ಎಂದು ಸಿಲಿಯ ಸಂದೇಹ ವ್ಯಕ್ತಪಡಿಸಿದಳು. ಸಿಲಿಯಾಗೆ ಶಾಪಿಂಗಿಗೆ ಹೋಗುವುದೆಂದರೆ ಖುಷಿ. ವುಲ್ಫ್‌ಬೆರ್ ಸಾಕಷ್ಟು ಹಣವನ್ನು ಅವಳಿಗೆ ಕೊಟ್ಟನು. ಅವಳು ಮಕ್ಕಳೊಡನೆ ಖುಷಿಯಿಂದ ಹೊರಟಳು. ಹಾಗೆಯೇ ಅಂಗಡಿಯವನ ಬಾಕಿ ಲೆಕ್ಕವನ್ನೂ ತೀರಿಸಬೇಕೆಂದುಕೊಂಡಳು.

ವುಲ್ಫ್‌ಬೆರ್ ಸೋಫಾದ ಮೇಲೆ ಹಾಗೆಯೇ ಉರುಳಿಕೊಂಡು ನಿದ್ರೆ ಮಾಡಲು ಯತ್ನಿಸಿದ. ರಾತ್ರಿಗೆ ಸಿಲಿಯಾ ಸೊಗಸಾದ ಊಟ ಸಿದ್ಧಪಡಿಸುತ್ತಾ ಳೆಂದು ಅವನಿಗೆ ಗೊತ್ತು. ಈಗ ಅವನು ಸಾಕಷ್ಟು ವಿಶ್ರಾಂತಿ ಪಡೆಯಲು ನಿಶ್ಚಯಿಸಿದ. ಮಲಗಿದ ತಕ್ಷಣವೇ ಆತನಿಗೆ ನಿದ್ದೆ ಬಂದಿತು. ಲುಬ್ಲಿನ್‌ನಲ್ಲಿ ರುವಂತೆ ಆತನಿಗೆ ಕನಸು. ನೀರಿನ ತೊಟ್ಟಿಯಲ್ಲಿ ಅರೆನಗ್ನನಾಗಿ ನಿಂತು ಸ್ನಾನ ಮಾಡುತ್ತಿರುವಂತಹ ದೃಶ್ಯ. ಆತನ ದೇಹದಿಂದ ಕೆಟ್ಟ ವಾಸನೆ ಹೊಮ್ಮುತ್ತಿತ್ತು. ಆತ ಮತ್ತೆ ಚರ್ಮ ಹದಮಾಡುವ ಕಾರ್ಖಾನೆಯಲ್ಲಿದ್ದ. ಕೆದರಿದ ತಲೆಯ, ಕೆಟ್ಟ ಮುಖದ ಹೆಂಗಸೊಬ್ಬಳು ಬಾಗಿಲು ತೆರೆದು, 'ಎಷ್ಟು ಹೊತ್ತು ಸ್ನಾನ ಮಾಡುವುದು ? ಏಳು, ಸಪೆರ್‌ನ ಸಮಯವಾಯಿತು' ಎಂದು ವ್ಯಗ್ರಳಾಗಿ ಹೇಳಿದಳು. ವುಲ್ಫ್‌ಬೆರ್ ತಕ್ಷಣ ಜಿಗಿದು ನಿಂತ. ಎಂಥ ಕನಸಿದು ? ಕಹಿ ತಿಂದಂತಾಯಿತು. ಕನಸು ಕಣ್ಣಿಗೆ ಕಟ್ಟಿದಂತಿತ್ತು. ಆ ಕೆಟ್ಟ ವಾಸನೆ ಇನ್ನೂ ಅವನ ಮೂಗಿನಲ್ಲಿತ್ತು. ವುಲ್ಫ್‌ಬೆರ್‌ಗೆ 150 ರೂಬೆಲ್‌ಗಳನ್ನು ಸೋತಿದ್ದ ರಷ್ಮನ್,

ಈತನಿಗೆ ಹವಾನ ಸಿಗಾರೊಂದನ್ನು ಉಡುಗೊರೆ ನೀಡಿದ್ದ. ಅದನ್ನು ಸೇದ
ಬೇಕೆನ್ನಿಸಿ ವುಲ್ಫ್‌ಬೆರ್ ತನ್ನ ಬ್ಯಾಗಿನತ್ತ ನಡೆದ. ವುಲ್ಫ್‌ಬೆರ್ ಸಿಗಾರ್ ಸೇದು
ತ್ತಿರಲಿಲ್ಲ. ತನ್ನ ಸಿಗರೇಟನ್ನು ತಾನೇ ಸುತ್ತಿಕೊಂಡು ಸೇದುತ್ತಿದ್ದ. ಈಗ ಆತನಿಗೆ
ಅರ್ಧರೂಬಲ್‌ಗಿಂತ ಹೆಚ್ಚು ಬೆಲೆಬಾಳುವ ಆ ಸಿಗಾರನ್ನು ಸೇದುವ ಕುತೂಹಲ
ವಾಯಿತು. ತಕ್ಷಣ ಚಿನ್ನದ ಮೆರುಗಿನ ಅಂಬರ್ ಸಿಗಾರ್ ಹಿಡಿಯೊಂದು ತನ್ನ
ಬಳಿಯಿದ್ದುದು ನೆನಪಾಯಿತು. ಹವಾನ ಸಿಗಾರ್ ಸೇದುವಾಗ, ಆ ಸೊಗಸಾದ
ಸಿಗಾರ್ ಹಿಡಿಯೊಂದಿಗೇ ಯಾಕೆ ಖುಷಿಯಾಗಿ ಸೇದಬಾರದು ಅನ್ನಿಸಿತು.

ವುಲ್ಫ್‌ಬೆರ್ ಸಿಗಾರ್ ಹಿಡಿಗಾಗಿ ಹುಡುಕಾಡ ತೊಡಗಿದ. ಆದರೆ ಅದು
ಸಿಗಲಿಲ್ಲ. ಯಾವ ವಸ್ತುವನ್ನೇ ಆಗಲಿ, ಕಳೆದುಕೊಳ್ಳುವುದೆಂದರೆ ವುಲ್ಫ್‌ಬೆರ್‌ಗೆ
ಅಸಾಧ್ಯ ಸಿಟ್ಟು. ಆತ ಬೀರುವಿನ ಡ್ರಾಯರುಗಳ ಮೂಲೆ ಮೂಲೆಯಲ್ಲೂ
ಹುಡುಕಿದ. ಅಲ್ಲಿ ರೇಷ್ಮೆ ವಸ್ತ್ರದಲ್ಲಿ ಸುತ್ತಿದ ಒಂದು ಸಣ್ಣ ಪೆಟ್ಟಿಗೆಯಿತ್ತು.
ಅದರಲ್ಲಿ ಆತ ಮದುವೆ ಒಪ್ಪಂದದ ಪತ್ರ, ಮಕ್ಕಳ ಜನನ ದಾಖಲೆಪತ್ರ, ಮನೆ
ಕ್ರಯಪತ್ರ–ಮೊದಲಾದ ಅಮೂಲ್ಯ ಪತ್ರಗಳನ್ನಿಟ್ಟಿದ್ದ. ಅಲ್ಲಿ ಸಿಗಾರ್ ಹಿಡಿ
ಇರುವ ಸಂಭವವೇ ಇಲ್ಲ. ಆದರೂ ವುಲ್ಫ್‌ಬೆರ್ ಸುಮ್ಮನೆ ಆ ಪೆಟ್ಟಿಗೆಯನ್ನು
ತೆರೆದ. ಅಲ್ಲಿ ಸಿಗಾರ್ ಹಿಡಿ ಇರಲಿಲ್ಲ. ಆದರೆ ಮದುವೆ ಒಪ್ಪಂದದ ಪತ್ರದ
ಮೇಲೆ ಹೊಳೆಯುವ ವಜ್ರದ ಜಡೆಬಿಲ್ಲೆಯೊಂದು ಇತ್ತು. ವುಲ್ಫ್‌ಬೆರ್‌ಗೆ
ಆಶ್ಚರ್ಯವಾಯಿತು. ಏನಿದು ? ಆತನಿಗೆ ಒಡವೆಗಳ ಬಗ್ಗೆ ತಿಳಿವಳಿಕೆಯಿತ್ತು.
ಇದು ನಿಜವಾದ ವಜ್ರ, ನಕಲಿಯಲ್ಲ. ಆ ಜಡೆಬಿಲ್ಲೆ ಹಳೆಯ ಕಾಲದ ಮಾದರಿ
ಯದಾಗಿದ್ದು ಅಪೂರ್ವವಾಗಿತ್ತು. ಅವನು ಅದನ್ನು ಪರೀಕ್ಷಿಸುತ್ತಿದ್ದಂತೆ ಅವನ
ಅಚ್ಚರಿ ಇಮ್ಮಡಿಯಾಗತೊಡಗಿತು. ಈ ಜಡೆಬಿಲ್ಲೆ ಇಲ್ಲಿಗೆ ಹೇಗೆ ಬಂತು ?
ಅದು ಸಿಲಿಯಾಳದ್ದಲ್ಲ. ತಾನಂತೂ ತಂದುಕೊಟ್ಟಿಲ್ಲ. ಕಾಸಿಗೆ ಕಾಸು ಕೂಡು
ಹಾಕಿ ಸಿಲಿಯಾ ನೂರಾರು ರೂಬಲ್ ಬೆಲೆಬಾಳುವ ಇದನ್ನು ಕೊಳ್ಳಲಾದೀತೆ ?
ಅಲ್ಲದೆ ಅಂತಹ ಒಡವೆ ಕಾಜ್ಲೋವಿನಲ್ಲಿ ಸಿಗುವಂಥದಲ್ಲ. ವುಲ್ಫ್‌ಬೆರ್ ತುಂಬಾ
ಸೂಕ್ಷ್ಮವಾಗಿ ಜಡೆಬಿಲ್ಲೆಯನ್ನು ಪರೀಕ್ಷಿಸಿದ. ಅದರ ಹಿಂಬದಿಯಲ್ಲಿ 'ಎ' ಮತ್ತು
'ಜಿ' ಎಂಬ ಎರಡು ಅಕ್ಷರಗಳನ್ನು ಕೆತ್ತಿತ್ತು. ಸ್ವಲ್ಪ ಸಮಯ ಹಾಗೆಯೇ ನಿಂತ
ವುಲ್ಫ್‌ಬೆರ್ ಜಡೆಬಿಲ್ಲೆಯನ್ನು ತನ್ನ ಒಳಜೇಬಿನಲ್ಲಿರಿಸಿದ. ಅವನ ಮನಸ್ಸಿನ
ತುಂಬ ಮಂಕು ಕವಿಯಿತು. ಸೋಫಾದ ಬಳಿ ಬಂದು ಒರಗಿ, ಕಣ್ಮುಚ್ಚಿ ಗಂಟನ್ನು

ಬಿಡಿಸಲು ಪ್ರಯತ್ನಿಸಿದ. ಅವನು ಎಷ್ಟೇ ಯೋಚಿಸಿದರೂ ಉತ್ತರ ಸಿಗಲಿಲ್ಲ. ಆಯಾಸವಾದಂತಾಗಿ ಕಡೆಗೆ ನಿದ್ದೆ ಮಾಡಿಬಿಟ್ಟ. ಮತ್ತೆ ಅದೇ ಕನಸು ! ಲುಬ್ಲಿನ್‌ನ ಆ ನೀರಿನ ತೊಟ್ಟಿಯಲ್ಲಿ ಸ್ನಾನ ಮಾಡುತ್ತಿರುವಂತೆ : ಚರ್ಮ ಹದ ಮಾಡುವ ಕಾರ್ಖಾನೆಯ ಆ ಕೆಟ್ಟ ವಾಸನೆ ಮೂಗು ತುಂಬಿತು. ತಲೆ ಕೆದರಿದ ಸುಕ್ಕು ಮುಖದ ಆ ಕೆಟ್ಟ ಮುದುಕಿ ಮತ್ತೆ ಬಂದು ಎಚ್ಚರಿಸಿದಳು. ವುಲ್ಫ಼ ಬೆರ್‌ಗೆ ಎಚ್ಚರವಾಯಿತು. ಇದಕ್ಕೆ ಏನರ್ಥವಿರಬಹುದು ? ಸಿಲಿಯಾಳಿಗೆ ಪ್ರೇಮಿಯೊಬ್ಬನಿದ್ದು ಆತ ಈ ಜಡೆಬಿಲ್ಲೆ ಕೊಟ್ಟಿರಬಹುದೇ ? ಆತನ ನಾಲಿಗೆಯ ತುದಿ ಕಹಿಯಾಯಿತು. ಬಿಕ್ಕಳಿಸಿದ. ಕೆಟ್ಟ ಕಮರುತೇಗು ಒಡಲಿನಾಳದಿಂದ ಬಂತು. ತನ್ನ ಕರ್ಚೀಫಿಗೆ ಉಗಿದ. ಇದಕ್ಕೆ ಏನಾದರೂ ಉತ್ತರವಿರಲೇಬೇಕು ! 'ಎ' ಮತ್ತು 'ಜಿ' ಅಕ್ಷರಗಳ ಅರ್ಥವೇನಿದ್ದಿರಬಹುದು ? ಕಾಜ್ಲೋವಿನಲ್ಲಿ ಜ್ಯೂ ಒಬ್ಬನಿದ್ದು, ಆತ ವಿವಾಹಿತ ಮಹಿಳೆಯೊಂದಿಗೆ ಸಂಬಂಧವಿಟ್ಟುಕೊಂಡಿರ ಬಹುದೇ ? ಸಿಲಿಯಾ ಹೀಗೆ ಮಾಡುವಂಥ ಹೆಂಗಸೇ ? ವುಲ್ಫ಼ಬೆರ್ ತಲೆಕೆಡಿಸಿ ಕೊಂಡಷ್ಟೂ ಸಮಸ್ಯೆ ಮತ್ತಷ್ಟು ಸಿಕ್ಕು ಸಿಕ್ಕಾಯಿತು. ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಷ್ಟೂ ನಿಗೂಢವಾಗುತ್ತಾ ಹೋಯಿತು. ರೂಮಿನಲ್ಲಿ ಅತ್ತಿಂದಿತ್ತ ಶತಪಥ ಹಾಕಿದ. 'ನಿನಗೆ ಸತ್ಯ ಗೊತ್ತಾ ? ಹೇಳು ಹೇಳು' ಎಂದು ಗಿಳಿಯನ್ನು ಕೇಳಿದ.

ಪಪ್ಪ ! ಪಪ್ಪ ! ಪಪ್ಪ ! ಪ್ರೀತಿ ಪ್ರೀತಿ ಪ್ರೀತಿ !

ಸಂಜೆಯಾಯಿತು. ಕಿಟಕಿಯ ಬಾಗಿಲುಗಳು ಹಸುರು ಬಣ್ಣಕ್ಕೆ ತಿರುಗಿದವು. ಸಂಜೆ ಸೂರ್ಯನ ಕಿತ್ತಲೆ ಬಣ್ಣದ ಬೆಳಕು ಗೋಡೆಯಲ್ಲಿ ಪ್ರತಿಫಲಿಸಿತು. ಗಿಳಿ ಗೂಡು ಸೇರಿತು. ವುಲ್ಫ಼ಬೆರ್ ಕತ್ತಲೆಯಲ್ಲಿ ಏಕಾಕಿ ಕುಳಿತು ಹವಾನಾ ಸಿಗಾರ್ ಹಚ್ಚಿ ನಿಧಾನ ಸೇದತೊಡಗಿದ. ಒಂದು ರೀತಿಯ ಮತ್ತು ಬರತೊಡಗಿತು. ವುಲ್ಫ಼ಬೆರ್ ಮತ್ತೆ ಮತ್ತೆ ತನ್ನ ಒಳ ಜೇಬಿನಲ್ಲಿ ಕೈಹಾಕಿ ಜಡೆಬಿಲ್ಲೆಯನ್ನು ಮುಟ್ಟುತ್ತಿದ್ದ. ಹೊರಗೆ ಸ್ವಲ್ಪ ಸದ್ದಾದರೂ ಎಚ್ಚರದಿಂದ ಆಲಿಸುತ್ತಿದ್ದ. ಅವನ ಹೆಂಡತಿ ಎಲ್ಲಿ ಹೋದಳು ? ಎಷ್ಟು ಹೊತ್ತು ? ಮಕ್ಕಳು ಮಲಗು ವವರೆಗೂ ಯಾವುದೇ ರೀತಿಯ ವಾದಕ್ಕಿಳಿಯಬಾರದೆಂದು ನಿರ್ಧರಿಸಿದ. ಸ್ವಲ್ಪ ಹೊತ್ತಿನ ನಂತರ ಹೆಜ್ಜೆಯ ಸಪ್ಪಳ ಹಾಗೂ ಮಾತಿನ ಧ್ವನಿ ಕೇಳಿಸಿತು. ಸಿಲಿಯಾ

ಹಿಂತಿರುಗಿ ಬಂದಳು. ಅವಳು ಮತ್ತು ಮಕ್ಕಳು, ಮೂವರೂ ಸಂತೋಷದಿಂದ ಕುಣಿಯುತ್ತಾ ಅನೇಕ ಪೊಟ್ಟಣಗಳನ್ನು ಹೊತ್ತು ತಂದರು.

ಸಿಲಿಯಾ ಸಂತೋಷದಿಂದಿದ್ದಳು. 'ಫ್ರುಲ್ಬೆರ್ ನೀನಿಲ್ಲಿದ್ದೀಯಾ ? ಯಾಕೆ ಕತ್ತಲಿನಲ್ಲಿ ಕುಳಿತಿರುವೆ ? ಏನು ನೀನು ಸೇದುತ್ತಿರುವುದು ?-'ಸಿಗಾರ್!'

'ರಷ್ಯನ್ ಒಬ್ಬ ರೈಲಿನಲ್ಲಿ ಅದನ್ನು ನನಗೆ ಕೊಟ್ಟ'

'ಇದರ ವಾಸನೆಯಿಂದ ನನಗೆ ತಲೆ ಸುತ್ತುತ್ತಿದೆ. ನಾವು ಅಂಗಡಿಯನ್ನೇ ಕೊಂಡು ತಂದಿದ್ದೇವೆ. ಒಂದು ನಿಮಿಷ ತಾಳು ದೀಪ ಹಚ್ಚುತ್ತೇನೆ'.

'ನನ್ನ ಬಳಿ ಒಂದು ಏಂಬರ್ ಸಿಗಾರ್ ಹಿಡಿಯಿತ್ತಲ್ಲ, ಎಲ್ಲಿ ಅದು ?'

'ಎಲ್ಲಿ ಅದು ? ನನಗೆ ಗೊತ್ತಿಲ್ಲ !'

ಮಕ್ಕಳ ತೋಳುಗಳು ಪೊಟ್ಟಣಗಳಿಂದ ತುಂಬಿದ್ದುವು. ಸಿಲಿಯಾ ಮೊದಲು ಟೇಬಲ್ ಲ್ಯಾಂಪ್ ಹಚ್ಚಿ ನಂತರ ದೊಡ್ಡ ದೀಪವೊಂದನ್ನು ಹಚ್ಚಿ ಹಿತ್ತಾಳೆಯ ಸರಪಳಿಯಿಂದ ಅದನ್ನು ತೂಗು ಹಾಕಿದಳು. ಸಿಲಿಯಾ ಉಲ್ಲನ್, ವೆಲ್ವೆಟ್, ಸಿಲ್ಕ್ ಮೊದಲಾದ ಎಲ್ಲ ರೀತಿಯ ಬಟ್ಟೆಗಳನ್ನೂ ಗಜಗಟ್ಟಳೆ ತಂದಿದ್ದಳು. ಈಗಾಗಲೇ ಅವಳು ದರ್ಜಿಯೊಂದಿಗೆ ಮಾತನಾಡಿ. ಕೆಲವು ಬಟ್ಟೆಗಳನ್ನಾದರೂ ಪಾಸೋವರ್ ಹಬ್ಬಕ್ಕೆ ಮುನ್ನ ಕೊಡುವಂತೆ ಒಪ್ಪಿಸಿದ್ದಳು. ಈಗ ಅವಳು ಗೃಹಿಣಿಯಂತೆ ರಾತ್ರಿ ಅಡಿಗೆಯನ್ನು ಸಿದ್ಧಪಡಿಸತೊಡಗಿದಳು. ಮಕ್ಕಳು ಸಾಮಾನ್ಯವಾಗಿ ಬೇಗ ಮಲಗುತ್ತಿದ್ದರು. ಆದರೆ ಇಂದು ಅಪ್ಪ ಬಂದಿರುವುದರಿಂದ ಅವರಿಗೆ ಸಂಭ್ರಮ. ಮಾರನೆಯ ಬೆಳಿಗ್ಗೆ ಅವರು ಸ್ಕೂಲಿಗೆ ಹೋಗುವುದು ಬೇಡವೆಂದು ಈಗಾಗಲೇ ಸಿಲಿಯಾ ಅವರಿಗೆ ಹೇಳಿದ್ದಳು.

೩

ಫ್ರುಲ್ಬೆರ್ ಊಟ ಮಾಡುತ್ತಾ, ಮಕ್ಕಳನ್ನು ತಮಾಷೆ ಮಾಡಿ, ನಗಿಸಿ, ಸಿಲಿಯಾಳ ಅಡಿಗೆಯನ್ನು ಹೊಗಳಿದ. ಆದರೆ ಆತ ಎಂದಿನಂತಿರಲಿಲ್ಲ. ಹೆಚ್ಚು ತಿನ್ನದೆ, ಬೇಗ ಊಟ ಮುಗಿಸುವ ಆತುರ ತೋರುತ್ತಾ, ಸಿಲಿಯಾಳತ್ತ ಆಗಾಗ್ಗೆ ಜೋಪಾಗಿ ನೋಡುತ್ತಿದ್ದ. ಊಟವಾದ ತಕ್ಷಣ ಮಕ್ಕಳಿಗೆ ಮಲಗಲು ಹೇಳಿದ. ಅಪ್ಪ ಬಂದ ಸಂಭ್ರಮವನ್ನು ಸರಿಯಾಗಿ ಆಚರಿಸಲಿಲ್ಲವೆಂದು ಅವರು ಪ್ರತಿಭಟಿಸಿ

ದರು. ಅವರು ತಮ್ಮ ಪುಸ್ತಕಗಳನ್ನು, ತಾವು ಬರೆದ ಚಿತ್ರಗಳನ್ನು, ಛಾಯಾಪಟ ಗಳನ್ನು ತೋರಿಸುವ ಆಸೆಯಿಂದಿದ್ದರು. ಆದರೆ ವುಲ್ಫ್‌ಬೆರ್ ಅವುಗಳನ್ನೆಲ್ಲಾ ನಾಳೆ ನೋಡುವುದಾಗಿ ಹೇಳಿ, ಮಕ್ಕಳು ಹೆಚ್ಚು ಹೊತ್ತು ಎಚ್ಚರದಿಂದಿರಬಾರ ದೆಂದು ಮಲಗಲು ಒತ್ತಾಯಿಸಿದ.

ಮಕ್ಕಳು ಗೊಣಗುತ್ತಾ, ಹಾಗೂ ಹೀಗೂ ಸ್ವಲ್ಪ ಹೊತ್ತು ಕಾಲ ಕಳೆದು ನಂತರ ಮಲಗಲು ಹೋದರು. ಸಿಲಿಯಾ ಮಕ್ಕಳು ಹಾಗೂ ಗಂಡ–ಇಬ್ಬರ ಪರವೂ ವಾದಿಸುತ್ತ. ಅವನನ್ನು ನೋಡಿ ನಕ್ಕಳು. ನಿಜವಾಗಿ ಆತ ಅವಳೊಡ ನಿರಲು ಆತುರದಿಂದಿದ್ದ. ಅದನ್ನು ಅರ್ಥಮಾಡಿಕೊಂಡ ಅವಳ ನೋಟ 'ನಿನಗೆ ಆತುರವಲ್ಲವಾ ?' ಎಂದು ಕೇಳುವಂತಿತ್ತು. ವುಲ್ಫ್‌ಬೆರ್ ಮಲಗುವ ಮನೆಗೆ ನಡೆದ. ಆತನ ಚೂಪಾದ ತುದಿಯ ಷೂಗಳು ಮಂಚದ ಮಗ್ಗುಲಲ್ಲಿ ಶಿಸ್ತಿನ ಸಿಪಾಯಿ ನಿಂತಂತೆ ಕಾಣಸುತ್ತಿದ್ದುವು. ಮೆತ್ತನೆಯ ಹಾಸಿಗೆಯ ಮೇಲೆ ವುಲ್ಫ್ ಬೆರ್ ಕುಳಿತ. ಸಿಲಿಯಾ ಮುಖ ತೊಳೆದು, ತಲೆ ಬಾಚಿ ಸಿಂಗರಿಸಿಕೊಂಡಳು. ಅವಳು ಯಾವಾಗಲೂ ಗಂಡನ ಬಳಿಗೆ ಬರುವ ಮುನ್ನ ಹೀಗೆಯೇ ಸಿಂಗರಿಸಿ ಕೊಳ್ಳುತ್ತಿದ್ದಳು. ನಗರಗಳಲ್ಲಿಯಂತೆ ಹಲ್ಲುಜ್ಜಿ, ಚಂದದ ಹೊಸ ನೈಟ್ ಗೌನ್ ಹಾಕಿಕೊಂಡು, ಪರಿಮಳಭರಿತ ಸುಗಂಧವನ್ನು ಸಿಂಪಡಿಸಿಕೊಂಡಳು. ಕನ್ನಡಿಯ ಮುಂದೆ ನಿಂತು ನೋಡಿಕೊಂಡ ಅವಳು. 'ನನ್ನೊಡನೆ ಇಂದು ಆತ ಅಸಮಾಧಾನ ಗೊಳ್ಳುವ ಸಂಭವವೇ ಇಲ್ಲ' ಎಂದುಕೊಂಡಳು. ರೂಮಿಗೆ ಬಂದ ತಕ್ಷಣ ದೀಪವಾರಿಸಿ, ತನ್ನನ್ನು ಪ್ರೀತಿಮಾಡುತ್ತಾನೆಂದು ಅವಳು ನಿರೀಕ್ಷಿಸಿದ್ದಳು. ಆದರೆ ವುಲ್ಫ್‌ಬೆರ್ ಹಾಸಿಗೆಯ ಮೇಲೆ ಕುಳಿತ ಅವಳನ್ನು ದಿಟ್ಟಿಸಿ ನೋಡಿದ.

'ದಯವಿಟ್ಟು ಬಾಗಿಲು ಹಾಕುವಷ್ಟು ಸೌಜನ್ಯ ತೋರುವಿಯಾ ?'

'ನಿನಗೇನಾದರೂ ಆಗಿದೆಯಾ ?'

'ಬಾಗಿಲು ಹಾಕು'

ಬಾಗಿಲು ಮುಚ್ಚಿತು.

ವುಲ್ಫ್‌ಬೆರ್ ತನ್ನ ದಿಂಬಿನಡಿಯಲ್ಲಿದ್ದ ಜಡೆಬಿಲ್ಲೆಯನ್ನು ತೆಗೆದು ತೋರಿ ಸುತ್ತಾ ಕೇಳಿದ–

'ನಿನಗೆ ಇದು ಎಲ್ಲಿಂದ ಬಂತು ?'

ಸಿಲಿಯಾ ಕಣ್ಣುಗಳನ್ನೆತ್ತಿ ಒಮ್ಮೆ ನೋಡಿದಳು. ಅವಳ ಮುಖಭಾವ

ತಕ್ಷಣ ಬದಲಾಯಿತು. ಆಶ್ಚರ್ಯಗೊಂಡು ಜಡೆಪಿನ್ನಿಯನ್ನೇ ನೋಡುತ್ತಾ ಕೆಳದನಿ ಯಲ್ಲಿ ಹೇಳಿದಳು : 'ಅದು ನನ್ನ ಬಳಿ ಬಹಳ ದಿನಗಳಿಂದಲೂ ಇದೆ.'

'ಎಷ್ಟು ದಿವಸದಿಂದ ?'

'ಕೆಲವು ವರ್ಷಗಳಿಂದ.'

'ನಿನ್ನ ಬಳಿ ಹೇಗೆ ಬಂತು ?'

ಸಿಲಿಯಾ ತಕ್ಷಣ ಉತ್ತರಿಸಲಿಲ್ಲ. ಸುಮ್ಮನಿದ್ದಳು. ಕಡೆಗೆ ಹುಬ್ಬುಗಳ ನ್ನೇರಿಸಿ 'ನನಗೆ ಸಿಕ್ಕಿತು' ಎಂದಳು. ಅವಳ ಮಾತುಗಳು ಕೇಳಿದವರು ನಂಬು ವಂತಿರಲಿಲ್ಲ.

'ನಿನಗೆ ಸಿಕ್ಕಿತು ! ಎಲ್ಲಿ ?'

'ಪ್ರಾರ್ಥನಾ ಮಂದಿರದ ಮಹಿಳಾ ವಿಭಾಗದಲ್ಲಿ'

'ಯಾವಾಗ ನೀನು ಪ್ರಾರ್ಥನಾ ಮಂದಿರಕ್ಕೆ ಹೋದದ್ದು ?'

'ರೋಶ್ ಹಸನತ್‌ನಲ್ಲಿ'

'ಅದು ಯಾರದೆಂದು ನೀನು ಕೇಳಲಿಲ್ಲವೇ ?'

'ಇಲ್ಲ'

'ನೀನು ಇದುವರೆಗೂ ನನಗೆ ಏಕೆ ಹೇಳಲಿಲ್ಲ ?'–ವುಲ್ಫ್‌ಬೆರ್ ಸ್ವಲ್ಪ ಹೊತ್ತು ಬಿಟ್ಟು ಕೇಳಿದ.

ಸಿಲಿಯಾ ತನ್ನ ಕತ್ತನ್ನು ಕೊಂಕಿಸಿ ಹೇಳಿದಳು : 'ನಾನು ನಿನಗೆ ಎಲ್ಲವನ್ನೂ ಹೇಳಲೇಬೇಕಾಗಿಲ್ಲ !'

ಮಕ್ಕಳು ಇನ್ನೂ ಎಚ್ಚರವಾಗಿದ್ದುದರಿಂದ ಗಂಡ ಹೆಂಡತಿಯರಿಬ್ಬರೂ ಮೆಲ್ಲಗೆ ಮಾತನಾಡುತ್ತಿದ್ದರು. ವುಲ್ಫ್‌ಬೆರ್ ಯೋಚಿಸುತ್ತಾ ಕುಳಿತ. 'ಅದರ ಹಿಂದೆ 'ಎ' ಮತ್ತು 'ಜಿ' ಎಂಬ ಎರಡು ಅಕ್ಷರಗಳು ಕೆತ್ತಿವೆ'

'ಹೌದು'

'ಯಾರದು ಅದು ?'

ಸಿಲಿಯಾ ಮೌನವಾಗಿದ್ದಳು. ಬಾಗಿಲ ಕಡೆ ನೋಡಿ. ಅದು ಮುಚ್ಚಿದೆ ಯೆಂದು ಖಚಿತಪಡಿಸಿಕೊಂಡಳು. ತಾವು ಮಾತನಾಡುತ್ತಿದ್ದ ಶಬ್ದಗಳು ಮಕ್ಕಳಿಗೆ ತಲುಪದ ಹಾಗೆ ತಡೆಯುಲೆಂಬಂತೆ ಎದ್ದು ಆತ್ತ ಹೋದಳು. ಮೊದಲಬಾರಿಗೆ ವುಲ್ಫ್‌ಬೆರ್ ಅವಳ ಕಣ್ಣುಗಳಲ್ಲಿ ಉದ್ಧಟತನದ ಛಾಯೆ ಕಂಡ.

'ನೀನೇನು ತನಿಖಾಧಿಕಾರಿಯಲ್ಲ ಅಲ್ಲವಾ ?'

'ಅದು ಯಾರದ್ದು ?'–ವುಲ್ಫ್‌ಬೆರ್ ತನ್ನ ದನಿ ಎತ್ತರಿಸಿದ.

'ಕಿರುಚಬೇಡ, ಆಲ್ಟಿ ಗಿಟಲ್‌ಳದು'

ನಿಮಿಷ ಮಾತ್ರದಲ್ಲಿ ವುಲ್ಫ್‌ಬೆರ್‌ಗೆ ಎಲ್ಲವೂ ಅರ್ಥವಾಯಿತು. ಅವನಿಗೆ ಎಲ್ಲ ನೆನಪಾಯಿತು. ಆಲ್ಟಿ ಗಿಟಲ್ ಜಡೆಬಿಲ್ಲೆ ಕಳೆದುಕೊಂಡದ್ದು ಹನುಕಾಹ್ ಹಬ್ಬದಲ್ಲಿ–ರೋಶ್ ಹಸನಶ್ ಹಬ್ಬದಲ್ಲಲ್ಲ. ಆಗ ಇಡೀ ಪಟ್ಟಣದ ತುಂಬ ಸುದ್ದಿಯಾಗಿತ್ತು.

'ನಿನ್ನ ಬಳಿ ಹೇಗೆ ಬಂತು ಅದು ?'

'ಸಿಕ್ಕಿತು'

'ಎಲ್ಲಿ ?'

'ಬೀದಿಯಲ್ಲಿ'

'ಒಂದು ನಿಮಿಷದ ಹಿಂದೆ ಪ್ರಾರ್ಥನಾಮಂದಿರದಲ್ಲಿ ಸಿಕ್ಕಿತು ಎಂದೆ.'

'ಏನೀಗ ?'

'ಆಲ್ಟಿ ಗಿಟಲ್ ತನ್ನ ಜಡೆಬಿಲ್ಲೆಯನ್ನು ಕಳೆದುಕೊಂಡದ್ದು ಡೆಬೊರಾಹ್ ಲೀಯಳ ಮದುವೆಯಲ್ಲಿ' ವುಲ್ಫ್‌ಬೆರ್ ಅರ್ಧ ತನಗೆ. ಅರ್ಧ ಸಿಲಿಯಾಗೆಂಬಂತೆ ಹೇಳಿದ. 'ನೀನು ಅಲ್ಲಿದ್ದೆ.... ಎಲ್ಲರನ್ನೂ ತನಿಖೆ ಮಾಡಿದರೆಂದೂ ಹೇಳಿದ್ದೆ.... ನನಗೆ ಚೆನ್ನಾಗಿ ನೆನಪಿದೆ.... ಸರಿ, ನೀನು ಅದನ್ನು ಎಲ್ಲಿ ಬಚ್ಚಿಟ್ಟಿದ್ದೆ ?'

ಸಿಲಿಯಾ ವ್ಯಂಗ್ಯವಾಗಿ ನಕ್ಕಳು. 'ಆಹಾ ! ಹೇಗೆ ನನ್ನನ್ನು ತನಿಖೆ ಮಾಡುತ್ತಿದ್ದಾನೆ! ಯಾರಾದರೂ ಇವನನ್ನು ಸಂತನೆಂದುಕೊಳ್ಳಬೇಕು!'

'ನೀನು ಕಳ್ಳಿ, ಹೌದಲ್ಲವಾ ?'

'ನೀನು ಕಳ್ಳನಾದರೆ ನಾನು ಯಾಕಾಗಬಾರದು ?'–ಸಿಲಿಯಾ ತಕ್ಷಣ ಚುರುಕಾಗಿ ಉತ್ತರಿಸಿದಳು. ಯಾಕೆ ಈ ಎಲ್ಲ ರಗಳೆ? ನೀನು ಏನು ಮಾಡುತ್ತೀಯೆಂಬುದು ಇಡೀ ಪಟ್ಟಣಕ್ಕೇ ಗೊತ್ತು. ನಮ್ಮ ಮಕ್ಕಳನ್ನು ಎಲ್ಲರೂ ರೇಗಿಸುತ್ತಾರೆ. ಉಪಾಧ್ಯಾಯರೂ ಸಹ ಅವರನ್ನು ತಮಾಷೆ ಮಾಡುತ್ತಾರೆ. ಸ್ಕೂಲಿನಲ್ಲಿ ಹುಡುಗಿಯರು ಯಾರಾದರೂ ಏನನ್ನಾದರೂ ಕಳೆದುಕೊಂಡರೆ ನಮ್ಮ ಮಾಶಾ ಮತ್ತು ಅಂಕಾರನ್ನು ಸಂದೇಹಿಸುತ್ತಾರೆ. ನಿನಗೆ ನೋವಾಗುತ್ತದೆಂದು ಈ ಎಲ್ಲವನ್ನೂ ನಾನು ನಿನಗೆ ಹೇಳುತ್ತಿರಲಿಲ್ಲ. ಆದರೆ ದಿನಕ್ಕೆ

ಹತ್ತು ಬಾರಿಯಾದರೂ ನನಗೆ ಬೇಸರವಾಗುತ್ತದೆ. ಅಂತಹುದರಲ್ಲಿ ನೀನು ಇದ್ದಕ್ಕಿದ್ದಂತೆ ಪ್ರಾಮಾಣಿಕ ಮನುಷ್ಯನೆಂಬಂತೆ ಏಕೆ ಆಡುತ್ತೀಯೆ ? ನಾನು ಶೀರಾ ಒಳ್ಳೆಯ ಹೆಣ್ಣಾಗಿದ್ದಲ್ಲಿ ನಿನ್ನನ್ನು ಮದುವೆಯೇ ಆಗುತ್ತಿರಲಿಲ್ಲ. ಅದು ಸ್ಪಷ್ಟವಾದ ಸರಳ ವಿಚಾರ.'

'ನೀನು ಅದನ್ನು ಕದ್ದಿದ್ದೀಯೆ, ಅಲ್ಲವಾ ?'

'ಹೌದು, ನಾನು ಕದ್ದಿದ್ದೇನೆ.'

ಸಿಲಿಯಾಳ ಕಣ್ಣುಗಳು ಭಯಮಿಶ್ರಿತ ನಗೆಯೊಂದಿಗೆ ಅವನತ್ತ ತಿರುಗಿದವು,

'ನೀನು ಹೇಗೆ ಕದ್ದೆ ?'

ಪಾದ್ರಿ ಪಠಣ ಮಾಡುತ್ತಿದ್ದಾಗ ಅವಳ ತಲೆಯಿಂದ ನಾನದನ್ನು ತೆಗೆದುಕೊಂಡೆ. ನಾನು ಯಾಕೆ ಹಾಗೆ ಮಾಡಿದೆನೆಂದು ನನಗೇ ಗೊತ್ತಿಲ್ಲ. ಅನೇಕ ವರ್ಷಗಳಿಂದ ಅದು ಇಲ್ಲಿ ಬಿದ್ದಿದ್ದೆ. ನೀನೇಕೆ ನನ್ನ ಬೀರುವನ್ನೆಲ್ಲ ಹುಡುಕಿದೆ ?

ನನ್ನ ಸಿಗಾರ್ ಹಿಡಿಗಾಗಿ ಹುಡುಕುತ್ತಿದ್ದೆ.

ನಿನ್ನ ಸಿಗಾರ್ ಹಿಡಿಯನ್ನು ನಾನು ತೆಗೆದುಕೊಂಡಿಲ್ಲ.

ಒಂದು ಕ್ಷಣ ಎಲ್ಲ ಸ್ತಬ್ಧವಾಯಿತು. ವುಲ್ಫ್‌ಬೆರ್ ತನ್ನ ಹಾಸಿಗೆಯಲ್ಲಿ ಸೆಟೆದು ಕೂತ. ಆತನ ಮುಖ ಗಡುಸಾಗಿ ಬಿಗಿದುಕೊಂಡಿತು. ಆತನಿಗೆ ಕೋಪ ಬಂದಿತ್ತೆಂದಲ್ಲ, ಆತ್ಮೀಯನೊಬ್ಬನ ಸಾವಿನಿಂದುಂಟಾಗುವ ನೋವಿನಂತೆ ಅವನ ಮನಸ್ಸಿನ ತುಂಬಾ ವ್ಯಥೆ ಆವರಿಸಿಕೊಂಡಿತ್ತು. ಇಷ್ಟು ದಿವಸಗಳವರೆಗೆ ಸಿಲಿಯಾ ಪ್ರಾಮಾಣಿಕ ಹೆಂಗಸೆಂಬುದು ಆತನ ನಂಬಿಕೆಯಾಗಿತ್ತು. ಉತ್ತಮ ಮನೆತನದ ಹೆಂಗಸಿಗೆ ತನ್ನ ಕೆಲಸದಿಂದಾಗಿ ಅಪಮಾನ ಮಾಡುತ್ತಿದ್ದೇನೆಂದು ಎಷ್ಟೋ ಸಾರಿ ತನ್ನನ್ನೇ ತಾನು ನಿಂದಿಸಿಕೊಂಡಿದ್ದ. ಅಪರೂಪಕ್ಕೊಮ್ಮೆ ಅವಳು ಅವನು ಆರಿಸಿಕೊಂಡ ಜೀವನ ವಿಧಾನದ ಬಗ್ಗೆ ದೂರಿದ್ದಳು. ನಗರದ ಜನ ಅವಳನ್ನು ನಿರ್ಲಕ್ಷಿಸುತ್ತಿದ್ದುದು, ಮಕ್ಕಳನ್ನು ಉತ್ತಮ ರೀತಿಯಲ್ಲಿ ಬೆಳೆಸುವ ಅಗತ್ಯ ಮೊದಲಾದ ಸಂಗತಿಗಳ ಬಗ್ಗೆ ಮಾತನಾಡಿದ್ದಳು. ಕೆಲವು ವರ್ಷಗಳ ಹಿಂದೆ ವುಲ್ಫ್‌ಬೆರ್ ಯಾನೋವಿನಲ್ಲಿ ಬಂಧಿಸಲ್ಪಟ್ಟು ಉಗ್ರಶಿಕ್ಷೆಯ ಅಪಾಯದಲ್ಲಿದ್ದಾಗ, ಸಿಲಿಯಾ ಯಾನೋಗೆ ಬಂದು ಅವನನ್ನು ಕಾಪಾಡಿದ್ದಳು. ನ್ಯಾಯಾಧೀಶನ ಕಾಲಿಗೆ ಬಿದ್ದು ಬೇಡಿಕೊಂಡಾಗ ಆತ 'ಏಳು ನನ್ನ ಸುಂದರಿ. ನಿನ್ನ ಈ ದುಃಖ

ವನ್ನು ನಾನಿನ್ನು ನೋಡಲಾರೆ' ಎಂದು ಹೇಳಿ ವುಲ್ಫ಼ಬೆರ್‌ನನ್ನು ಬಿಡುಗಡೆ ಮಾಡಿದ್ದನ್ನು ಸಿಲಿಯಾ ಆತನಿಗೆ ಹೇಳಿದ್ದಳು. ಆಗ ಅದು ಅವನ ಮನಸ್ಸಿಗೆ ವಿಶೇಷವೆನ್ನಿಸಿರಲಿಲ್ಲ. ಆದರೆ ಈಗ ಈ ಕತೆಯ ಹಿಂದಿನ ಸತ್ಯ ಇಷ್ಟೇ ಆಗಿರಲಿಕ್ಕಿಲ್ಲ ಅನ್ನಿಸಿತು. ಅನೇಕ ಬಾರಿ ದೊಡ್ಡ ನಗರಗಳಲ್ಲಿನ ಬಿನ್ನಾಣಗಿತ್ತಿಯರು ಅವನನ್ನು ಆಕರ್ಷಿಸಲು ಪ್ರಯತ್ನಿಸಿದ್ದರು. ಆದರೆ ಆತ ತನಗೆ ಕಾಜ್ಲೋವಿನಲ್ಲಿ ವಿಧೇಯ ಹೆಂಡತಿಯಿದ್ದಾಳೆ. ತನ್ನ ಪ್ರೀತಿಯ ಮಕ್ಕಳ ತಾಯಿಯಿದ್ದಾಳೆ ಎಂದು ಅಂತಹ ಆಕರ್ಷಣೆಗೆ ಬಲಿಯಾಗಿರಲಿಲ್ಲ. ಅವಳಿಗಾಗಿ ಆತ ತನ್ನೆಲ್ಲ ಸ್ವಾತಂತ್ರ್ಯವನ್ನೂ ಮೊಟಕುಗೊಳಿಸಿದ್ದ. ಹೆಚ್ಚು ವೆಚ್ಚದ ಹೋಟೆಲ್ ಹಾಗೂ ಸಿನೆಮಾ ಮಂದಿರಗಳಿಗೆ ಆತ ಹೋಗುತ್ತಿರಲಿಲ್ಲ. ಈಗ ಅದೆಲ್ಲ ವ್ಯರ್ಥ ! ಅವನೊಳಗಿನ ಯಾವುದೋ ಶಕ್ತಿ ನಕ್ಕು ನುಡಿಯಿತು. 'ನೀನೊಬ್ಬ ಮೂರ್ಖ ವುಲ್ಫ಼ಬೆರ್, ನೀನೊಬ್ಬ ಶತಮೂರ್ಖ !' ಇದ್ದಕ್ಕಿದ್ದಂತೆ ಅವನಿಗೆ ವಯಸ್ಸಾದಂತೆ ಅನ್ನಿಸಿತು.

'ದೀಪ ಆರಿಸಲಾ ?' ಸಿಲಿಯಾ ಕೇಳಿದಳು.

'ನಿನ್ನಿಷ್ಟ'

ಸಿಲಿಯಾ ದೀಪವಾರಿಸಿ ಹಾಸಿಗೆಯ ಮೇಲೆ ಉರುಳಿದಳು. ಬಹಳ ಹೊತ್ತು ಮೌನ ಆವರಿಸಿತ್ತು. ವುಲ್ಫ಼ಬೆರ್ ತನ್ನೊಳಗಿನ ದನಿಯನ್ನಾಲಿಸುತ್ತಿದ್ದ. ಎದೆಯ ಮೇಲೆ ಮಂಜು ಗಡ್ಡೆಯನ್ನಿಟ್ಟಂತಾಗಿ ಇಡೀ ದೇಹ ತಣ್ಣಗಾದ ಅನುಭವವಾಯಿತು.

'ಜಿಲ್ಲಾ ನ್ಯಾಯಾಧೀಶನೊಂದಿಗೆ ನೀನು ಮಲಗಿದ್ದೆಯಾ ?'

'ನೀನು ಯಾವುದರ ಬಗ್ಗೆ ಮಾತನಾಡುತ್ತಿದ್ದೀಯಾ, ನನಗರ್ಥವಾಗುತ್ತಿಲ್ಲ.

'ನಿನಗೆ ಅರ್ಥವಾಗಿದೆ.'

'ನಿನಗೆ ಬುದ್ಧಿ ಕೆಟ್ಟಿರಬೇಕು.'

ವುಲ್ಫ಼ಬೆರ್ ಕಣ್ಣು ಮುಚ್ಚಿ, ಕೈಕಾಲುಗಳನ್ನು ಚಾಚಿ ಮೌನವಾಗಿ ಮಲಗಿದ. ಪಕ್ಕದ ರೂಮಿನಲ್ಲಿ ಮಕ್ಕಳು ಇನ್ನೂ ಪಿಸುಗುಡುತ್ತಾ ನಗುತ್ತಿದ್ದರು. ಆಚೆ ತಣ್ಣನೆಯ ಗಾಳಿ ಬೀಸುತ್ತಿದ್ದು, ಕಿಟಕಿಯ ಪರದೆಗಳು ಅಲುಗಾಡುತ್ತಿದ್ದುವು. ಬಿರುಕುಗಳ ಮಧ್ಯದಿಂದ ಬೆಳದಿಂಗಳು ತೂರಿ ಬರುತ್ತಿತ್ತು. ಆಗಾಗ್ಗೆ

ಜಿಲಿಯಾಳ ಮಂಚ ಕಿರುಗುಟ್ಟುತ್ತಿತ್ತು. ವುಲ್ಫ್‌ಬೆರ್ ಮನೆಗೆ ಬರುವಾಗ ಜಿಲಿಯಾಳ ಬಗ್ಗೆ ತುಂಬಾ ಆಸೆಯಿಂದ ಬಂದಿದ್ದ. ಆದರೆ ಅದೆಲ್ಲ ಈಗ ಸಂಪೂರ್ಣ ನಾಶವಾಗಿತ್ತು. 'ಎಲ್ಲ ಮುಗಿಯಿತು' ಎಂದು ತನಗೆ ತಾನೇ ಹೇಳಿಕೊಂಡ. ಒಳ್ಳೆಯ ಏಳು ವರ್ಷಗಳು ಮುಗಿದಿದ್ದವು. ಅವನ ಅಂತರಂಗ ದುಃಖದಿಂದ ತುಂಬಿತು. ಯಾರಿಗೆ ಗೊತ್ತು, ಮಕ್ಕಳೂ ತನ್ನವಲ್ಲದಿರಬಹುದು ! ಇನ್ನು ರೈಲು ಪ್ರಯಾಣ ಮಾಡುವುದಾಗಲೀ, ಸುಲಭ ದರದ ಹೋಟೇಲ್‌ಗಳಲ್ಲಿ ಇರುವುದಾಗಲೀ, ಜೀವವನ್ನು ಪಣವಾಗಿಟ್ಟು ಜಾತ್ರೆಗಳಲ್ಲಿ ಕಳ್ಳತನ ಮಾಡುವುದಾಗಲೀ ಏತಕ್ಕಾಗಿ ಅನ್ನಿಸಿತು. ಅವಳು ಕಳ್ಳಿಯಾದಲ್ಲಿ ನಾನು ಪ್ರಾಮಾಣಿಕನಾಗಿರಬೇಕು ಎಂದು ವುಲ್ಫ್‌ಬೆರ್ ಅಂದುಕೊಂಡ. ಒಂದು ಸಂಸಾರದಲ್ಲಿ ಇಬ್ಬರು ಕಳ್ಳರಿಗೆ ಅವಕಾಶವಿರಬಾರದು.

ಈ ವಿಲಕ್ಷಣ ಆಲೋಚನೆಯಿಂದ ವುಲ್ಫ್‌ಬೆರ್‌ಗೇ ದಿಗ್ಭ್ರಮೆಯಾಯಿತು. ಆದರೆ ಅವನಿಗೆ ಇದನ್ನು ಬಿಟ್ಟು ಬೇರೆ ದಾರಿಯಿರಲಿಲ್ಲ. ಸ್ವಲ್ಪ ಹೊತ್ತು ಹಾಗೇ ಮಲಗಿ ಕತ್ತಲೆಯನ್ನು ದಿಟ್ಟಿಸುತ್ತಿದ್ದ. ನಂತರ ಅವನು ತನ್ನ ಕಾಲುಗಳನ್ನು ನೆಲದ ಮೇಲೂರಿ ಎದ್ದು ನಿಂತ.

'ನೀನು ಎಲ್ಲಿಗೆ ಹೋಗುತ್ತಿದ್ದೀಯಾ ?'

'ಲುಬ್ಲಿನ್‌ಗೆ'

'ಈ ಮಧ್ಯರಾತ್ರಿಯಲ್ಲಿ ?'

'ಹೌದು, ಈ ಮಧ್ಯರಾತ್ರಿಯಲ್ಲಿ.'

'ಲುಬ್ಲಿನ್‌ನಲ್ಲಿ ಏನು ಮಾಡುತ್ತೀಯಾ ?' ಜಿಲಿಯಾ ಕೇಳಿದಳು.

ವುಲ್ಫ್‌ಬೆರ್ ಉತ್ತರಿಸಿದ 'ಚರ್ಮ ಹದ ಮಾಡುವ ಕಾರ್ಖಾನೆಯಲ್ಲಿ ಕಾರ್ಮಿಕನಾಗುತ್ತೇನೆ.'

# ಒಂದು ಸೂಜಿಯ ಕತೆ

ಪ್ರಿಯ ಓದುಗರೆ, ಇತ್ತೀಚಿನ ದಿವಸಗಳಲ್ಲಿ ಪ್ರೇಮವಿವಾಹಗಳೇ ಹೆಚ್ಚು. ತರುಣ-ತರುಣಿಯರಲ್ಲಿ ಸ್ನೇಹ ಬೆಳೆದು, ಸ್ನೇಹ ಪ್ರೀತಿಯಾಗಿ ಪಲ್ಲವಿಸುತ್ತದೆ. ಇಬ್ಬರ ನಡುವೆ ಜಗಳವಾಗುವ ವರೆಗೆ, ದ್ವೇಷ ಹುಟ್ಟುವ ವರೆಗೆ ಒಟ್ಟಿಗೇ ಜೊತೆ ಜೊತೆಯಾಗಿಯೇ ಇರುತ್ತಾರೆ. ನಮ್ಮ ದಿವಸಗಳೇ ಬೇರೆ. ನಾವು ತಂದೆ ತಾಯಿಯರನ್ನು ದೃಢವಾಗಿ ನಂಬಿದ್ದೆವು. ನನ್ನ ವಿಚಾರವನ್ನೇ ಹೇಳುವುದಾದರೆ, ನನ್ನ ಜೋಡಿಯನ್ನು, ಮದುವೆಯ ದಿನ ನನ್ನ ಮುಖಕ್ಕೆ ಅಡ್ಡವಾಗಿ ಹಿಡಿದಿದ್ದ ಪರದೆಯನ್ನು ತೆಗೆಯುವವರೆಗೆ ನಾನು ನೋಡಿಯೇ ಇರಲಿಲ್ಲ. ಆಗ ಆತ ಕೆಂಚು ಗಡ್ಡ ಹಾಗೂ ಪುರಡಿದ ಕೆನ್ನೆ ಗೂದಲುಗಳೊಂದಿಗೆ ನನ್ನೆದುರು ನಿಂತಿದ್ದ. ಅದು ಪೆಂಟೆಕಾಸ್ಟ್ ಹಬ್ಬದ ನಂತರದ ದಿನಗಳಾಗಿದ್ದರೂ ಚಳಿಗಾಲದಲ್ಲಿಯಂತೆ ಆತ ತುಪ್ಪಳದ ಕೋಟು ಧರಿಸಿದ್ದ. ಆ ಕ್ಷಣದಲ್ಲಿ ನಾನು ಎಚ್ಚರ ತಪ್ಪಿಬೀಳದಿದ್ದುದೇ ಒಂದು ಪವಾಡ. ನಾನು ಬೇಸಿಗೆಯ ಆ ದೀರ್ಘವಾದ ಇಡೀ ದಿನ ಉಪವಾಸ ಮಾಡಿದ್ದೆ. ಏನೇ ಆಗಲಿ ನನ್ನ ವೈವಾಹಿಕ ಜೀವನದ ಕಹಿ ಅನುಭವವನ್ನು ನನ್ನ ಆತ್ಮೀಯರು ಯಾರೂ ಪಡೆಯದಿರಲಿ ಎಂದು ಆಶಿಸುತ್ತೇನೆ.

ಹೌದು, ಪ್ರೀತಿಯೊಂದು ಹುಚ್ಚು ! ತರುಣನಾಗಲೀ, ತರುಣಿಯಾಗಲೀ ಯಾವುದು ತಮಗೆ ಒಳ್ಳೆಯದೆಂದು ಏನು ಬಲ್ಲರು ? ತಾಯಂದಿರಿಗೆ ಅದರ ಸುಳುಹುಗಳಾದರೂ ತಿಳಿದಿರುತ್ತದೆ. ಕ್ರಾಸ್ನೋವ್‌ನಲ್ಲಿ ರೀಜೆಲಿ ಎಂಬ ಹೆಂಗಸಿದ್ದಳು. ಅವಳು ತನ್ನ ಮಕ್ಕಳಿಗಾಗಿ ಹೆಣ್ಣು ನೋಡಲು ಇದ್ದಕ್ಕಿದ್ದಂತೆ ಹುಡುಗಿಯರಿರುವ ಮನೆಗಳಿಗೆ ಬೆಳಿಗ್ಗೆಯೇ ಹೋಗಿ ಬಿಡುತ್ತಿದ್ದಳು. ಹಾಸಿಗೆಯ ಬಟ್ಟೆಗಳು ಕೊಳೆಯಾಗಿದ್ದರೆ, ತಲೆ ಬಾಚದೆ ಅಸ್ತವ್ಯಸ್ತ ಉಡುಪಿನಲ್ಲಿ ಆ ಹುಡುಗಿ

ಬಾಗಿಲು ತೆರೆದರೆ, ಅಲ್ಲಿಗೆ ಮುಗಿಯಿತು. ಪ್ರತಿಯೊಬ್ಬರಿಗೂ ಇವಳ ಈ ರೀತಿ ಗೊತ್ತಿತ್ತು. ಮಾತ್ರವಲ್ಲ, ಎಲ್ಲಿಯಾದರೂ ಮುಂಜಾನೆ ಅವಳನ್ನು ಮಾರ್ಕೆಟ್ ಪ್ರದೇಶದಲ್ಲಿ ನೋಡಿದರೆ ಎಲ್ಲ ಹುಡುಗಿಯರೂ ತಮ್ಮ ಮನೆಯ ಬಾಗಿಲು ಗಳನ್ನು ಭದ್ರಪಡಿಸುತ್ತಿದ್ದರು. ಅವಳಿಗೆ ಆರು ಜನ ಮದುವೆಗೆ ಬಂದ ಗಂಡು ಮಕ್ಕಳಿದ್ದರು. ಅವಳು ಅವರಿಗಾಗಿ ಮಾಡಿದ ಯಾವುದೇ ಜೋಡಿ ಅಷ್ಟೇನೂ ಸರಿಯಾಗಲಿಲ್ಲ. ಅದು ಬೇರೆ ಕತೆ ಬಿಡಿ. ಒಂದು ಹುಡುಗಿ ಮದುವೆಗೆ ಮುನ್ನ ಶುಚಿಯಾಗಿದ್ದು, ಸದಭಿರುಚಿಯುಳ್ಳವಳಾಗಿರಬಹುದು. ನಂತರ ಕೆಡಲು ಸಾಧ್ಯ ವಿಲ್ಲವೇ ? ಪ್ರತಿಯೊಂದೂ ಅದೃಷ್ಟವನ್ನು ಅವಲಂಬಿಸಿರುತ್ತದೆ.

ಆದರೆ ಈಗ ನಿಮಗೆ ನಾನೊಂದು ಕತೆ ಹೇಳುತ್ತೇನೆ. ರೂಬಿಶೋ ಎಂಬಲ್ಲಿ ರೆಬ್‌ಲೆಮೆಲ್ ವ್ಯಾಗ್‌ಮೆಸ್ಟರ್ ಎಂಬ ಶ್ರೀಮಂತನಿದ್ದ. ಆ ದಿವಸಗಳಲ್ಲಿ ನಾವು ಯಾರನ್ನೂ ಮನೆತನದ ಹೆಸರುಗಳಿಂದ ಕರೆಯುತ್ತಿರಲಿಲ್ಲ. ಆದರೆ ರೆಬ್‌ಲೆಮೆಲ್ ಅತ್ಯಂತ ಶ್ರೀಮಂತನಾಗಿದ್ದ. ಹೀಗಾಗಿ ಆತನನ್ನು ವ್ಯಾಗ್‌ಮೆಸ್ಟರ್ ಎಂದೇ ಕರೆಯುತ್ತಿದ್ದರು. ಅವನ ಹೆಂಡತಿ ಏಸ್ತರ್‌ರೋಸಾ, ವಿಸ್ತುಲಾದ ಮತ್ತೊಂದು ಭಾಗದಿಂದ ಬಂದವಳು. ಅವಳನ್ನು ನಾನು ಕಣ್ಣಾರೆ ನೋಡಿದ್ದೆ. ತುಂಬಾ ಚೆಲುವೆಯಾದ ಅವಳು ಆಧುನಿಕ ಪರಿಸರದಿಂದ ಬಂದವಳಾಗಿದ್ದಳು. ಅವಳು ತನ್ನ ಮುಡಿಗೆ ಯಾವಾಗಲೂ ರೇಶ್ಮೆಯ ಕಪ್ಪು ಲೇಸುಗಳನ್ನು ಬಳಸುತ್ತಿದ್ದಳು. ಅವಳ ಮುಖ ಬೆಳ್ಳಗೆ ನುಣುಪಾಗಿದ್ದು, ಚಿಕ್ಕ ಹುಡುಗಿಯ ಮುಖದಂತೆ ಹೊಳೆ ಯುತ್ತಿತ್ತು. ಅಚ್ಚ ಕಪ್ಪು ಬಣ್ಣದ ಕಣ್ಣುಗಳು ಕಾಂತಿಯುಕ್ತವಾಗಿದ್ದುವು. ಅವಳಿಗೆ ರಷ್ಯನ್, ಪೋಲಿಷ್, ಜರ್ಮನ್ ಮಾತ್ರವಲ್ಲ, ಫ್ರೆಂಚ್ ಸಹ ಬರುತ್ತಿತ್ತು. ಪಿಯಾನೋ ನುಡಿಸುತ್ತಿದ್ದಳು. ಬೀದಿಗಳು ಕೆಸರಾಗಿದ್ದಾಗಲೂ ಸಹ ಅವಳು ಜೇಡಿಯಾಳುವ ಸೊಗಸಾದ ಎತ್ತರದ ಹಿಮ್ಮಡಿಯ ಶೂ ಧರಿಸುತ್ತಿದ್ದಳು. ವಸಂತದ ಒಂದು ದಿನ ಅವಳು ಎರಡೂ ಕೈಗಳಲ್ಲಿ ತನ್ನ ಲಂಗವನ್ನು ಮೊಣಕಾಲವರೆಗೆ ಎತ್ತಿ ಹಿಡಿದು ಕಲ್ಲಿನಿಂದ ಕಲ್ಲಿಗೆ ಹಕ್ಕಿಯಂತೆ ಹಾರುತ್ತಾ ಹೋಗುವುದನ್ನು ನೋಡಿದಾಗ 'ಇವಳು ನಿಜವಾದ ಹೆಣ್ಣು' ಅನ್ನಿಸಿತ್ತು. ಅವಳಿಗೆ ಒಬ್ಬನೇ ಮಗನಿದ್ದ–ಬೆನ್‌ಜಿಯಾನ್. ಅವನು ಅವನ ಅಮ್ಮನ ಪ್ರತಿರೂಪದಂತಿದ್ದ. ನಾವು ಅವಳ ಕಡೆಯಿಂದಲ್ಲ, ಅವಳ ಗಂಡನ ಕಡೆಯಿಂದ ಅವರಿಗೆ ದೂರದ ಸಂಬಂಧಿಗಳು. ಬೆನ್‌ಜಿಯಾನ್–ಬೆನ್‌ಜಿ ಎಂದು ಕರೆಯುತ್ತಿದ್ದುದು. ಎಲ್ಲ

ಒಳ್ಳೆಯ ಗುಣಗಳನ್ನು ಹೊಂದಿದ್ದ. ಸುಂದರ, ಜಾಣ, ವಿದ್ಯಾವಂತ. ಹಗಲು ಅವನಿಗೆ ತೋರಾ ಪವಿತ್ರಗ್ರಂಥದ ಅಭ್ಯಾಸ ನಡೆಯುತ್ತಿದ್ದು, ಸಂಜೆಯ ವೇಳೆಯಲ್ಲಿ ಎಲ್ಲ ಧರ್ಮಗಳ ಬಗ್ಗೆಯೂ ಅವನಿಗೆ ಪಾಠವಿರುತ್ತಿತ್ತು. ಬೆನ್‌ಜಿಗೆ ತಾಯಿಯಂತೆಯೇ ಕಪ್ಪು ಕೂದಲು ಹಾಗೂ ಆಕರ್ಷಕ ಮೈ ಬಣ್ಣವಿದ್ದು, ಆತ ಅತ್ಯಂತ ಸ್ಫುರದ್ರೂಪಿಯಾಗಿದ್ದ. ಬೇಸಿಗೆಯ ದಿನಗಳಲ್ಲಿ ಆತ ಅತ್ಯಾಧುನಿಕವಾಗಿ ಹೊಲಿದ ಗ್ಯಾಬರ್ಡಿನ್ ಪ್ಯಾಂಟ್ ಧರಿಸಿ ಸೊಗಸಾದ ಶೂ ಹಾಕಿಕೊಂಡು ಬೀದಿಗಿಳಿದನೆಂದರೆ ಎಲ್ಲ ಹುಡುಗಿಯರೂ ತಮ್ಮ ಮನೆಯ ಕಿಟಕಿಗಳಲ್ಲಿ ಇಣುಕಿ ಅವನಲ್ಲೇ ಕಣ್ಣು ನೆಡುತ್ತಿದ್ದರು. ಆಗಿನ ಕಾಲದಲ್ಲಿ ವರದಕ್ಷಿಣೆ ಕೊಡುವುದು ಮಾತ್ರ ರೂಢಿಯಲ್ಲಿದ್ದರೂ ಸಹ ಬೆನ್‌ಜಿಯ ತಂದೆ ತನ್ನ ಮಗನ ಕನ್ಯಾಶುಲ್ಕಕ್ಕಾಗಿ ಹತ್ತು ಸಾವಿರ ರೂಬೆಲ್‌ಗಳನ್ನು ತೆಗೆದಿರಿಸಿದ್ದ. ಆತನಿಗೆ ಮಗ–ಮಗಳು ಇವರಲ್ಲಿ ವ್ಯತ್ಯಾಸವಿರಲಿಲ್ಲ. ಬೆನ್‌ಜಿ ಒಬ್ಬನೇ ಅವನ ವಂಶದ ಉತ್ತರಾಧಿಕಾರಿಯಾಗಿದ್ದವನು. ಅವರು ತಮ್ಮ ಮಗನಿಗಾಗಿ ಆ ಪ್ರಾಂತ್ಯದ ಶ್ರೀಮಂತ ಮನೆತನದ ಎಲ್ಲ ಹೆಣ್ಣುಗಳನ್ನು ನೋಡಿದ್ದರು. ಆದರೆ ಹೆಣ್ಣಿನ ಆಯ್ಕೆಯಲ್ಲಿ ಎಸ್ತರ್‌ರೋಸಾ ಅತ್ಯಂತ ಎಚ್ಚರದಿಂದಿದ್ದಳು. ಅವನಿಗೆ ಮನೆಯಲ್ಲಿ ಯಾವುದೇ ಕೆಲಸ ಮಾಡುವ ಅಗತ್ಯವಿರಲಿಲ್ಲ. ಮೂವರು ಹೆಣ್ಣಾಳುಗಳು, ಒಬ್ಬ ಗಂಡಾಳು, ಜೊತೆಗೆ ಗಾಡಿ ಹೊಡೆಯುವವನೊಬ್ಬ ಇದ್ದರು. ಹೀಗಾಗಿ ಅವಳು ತನ್ನ ಬಹುಪಾಲು ವೇಳೆಯನ್ನೆಲ್ಲಾ ಬೆನ್‌ಜಿಗೆ ಹುಡುಗಿ ಹುಡುಕುವುದರಲ್ಲಿಯೇ ಕಳೆಯುತ್ತಿದ್ದಳು. ಅವಳು ಈಗಾಗಲೇ ಪೋಲೆಂಡ್‌ನ ಅರ್ಧಭಾಗದಲ್ಲಿ ಚೆಲುವೆಯರೆನ್ನಬಹುದಾದ ಎಲ್ಲ ಹುಡುಗಿಯನ್ನೂ ಪರೀಕ್ಷಿಸಿದ್ದಳು. ಆದರೆ ಅವರಲ್ಲೆಲ್ಲಾ ಅವಳು ಒಂದಲ್ಲ ಒಂದು ಕೊರತೆ ಕಂಡಿದ್ದಳು. ಮುಖ್ಯವಾಗಿ ಎಸ್ತರ್‌ರೋಸಾ ಹುಡುಕುತ್ತಿದ್ದುದು ಸನ್ನಡತೆಯ ಹುಡುಗಿಯನ್ನು. 'ನಯವಿಲ್ಲದ ಒರಟು ಹೆಣ್ಣಾದರೆ ಕಷ್ಟಪಡುವವನು ಗಂಡನು. ನನ್ನ ಮಗ ಬೆನ್‌ಜಿ ಹಾಗೆ ಕಷ್ಟಪಡುವುದು ನನಗಿಷ್ಟವಿಲ್ಲ' ಎಂದು ಅವಳು ಹೇಳುತ್ತಿದ್ದಳು. ನನಗೆ ಆ ವೇಳೆಗಾಗಲೇ ಮದುವೆಯಾಗಿತ್ತು. ಮದುವೆಯಾದಾಗ ನನಗೆ ಹದಿನೈದು ವರ್ಷಗಳು. ಎಸ್ತರ್‌ರೋಸಾಳಿಗೆ ರೂಬಿಶೋನಲ್ಲಿ ನಿಜವಾದ ಆಪ್ತ ಗೆಳತಿಯರಿರಲಿಲ್ಲ. ನಾನು ಆಗಾಗ ಅವರ ಮನೆಗೆ ಹೋಗುತ್ತಿದ್ದೆ. ನನಗೆ ಅವಳು ಕಸೂತಿ ಹೇಳಿಕೊಡುತ್ತಿದ್ದಳು. ಅವಳದು ಅದ್ಭುತ ಕೈ. ಮನಸ್ಸು ಉಲ್ಲಾಸಗೊಂಡಿದ್ದಾಗ

ಅವಳು ತನ್ನ ಬಟ್ಟೆಗಳನ್ನು ತಾನೇ ಹೊಲಿಯುತ್ತಿದ್ದಳು, ಒಮ್ಮೆ ನನಗೂ ಒಂದು ಜೊತೆ ಡ್ರೆಸ್ ಹೊಲಿದು ಕೊಟ್ಟಿದ್ದಳು. ವ್ಯಾಪಾರ-ವ್ಯವಹಾರ ಗಳಲ್ಲಿಯೂ ಅವಳಿಗೆ ಜಾಣ್ಮೆಯಿತ್ತು. ಅವಳ ಗಂಡ ಎಲ್ಲ ವಿಚಾರಗಳಲ್ಲಿಯೂ ಅವಳ ಸಲಹೆ ಪಡೆಯುತ್ತಿದ್ದ. ಯಾವ ಆಸ್ತಿಯನ್ನಾಗಲೀ ಕೊಳ್ಳಬೇಕು ಅಥವಾ ಮಾರಬೇಕು ಎಂದು ಅವಳು ಹೇಳಿದರೆ ತತ್‌ಕ್ಷಣ ಅವಳ ಗಂಡ ಎಸ್ಟೇಟ್ ಏಜೆಂಟ್‌ಗೆ ಫೋನ್ ಮಾಡಿ ಹೇಳುತ್ತಿದ್ದ-'ನನ್ನ ಹೆಂಡತಿ ಇದನ್ನು ಕೊಳ್ಳಲು ಅಥವಾ ಮಾರಲು ಅಪೇಕ್ಷಿಸಿದ್ದಾಳೆ.' ಅವಳ ಎಣಿಕೆ ಎಂದೂ ತಪ್ಪಾಗುತ್ತಿರಲಿಲ್ಲ.

ಬೆನ್‌ಜಿಗೆ ಹತ್ತೊಂಬತ್ತು ವರ್ಷಗಳಾದರೂ ಇನ್ನೂ ನಿಶ್ಚಿತಾರ್ಥ ಸಹ ಆಗಿರಲಿಲ್ಲ. ಆ ದಿನಗಳಲ್ಲಿ ಹತ್ತೊಂಬತ್ತು ವರ್ಷಗಳೆಂದರೆ ಮದುವೆಗೆ ಮೀರಿದ ವಯಸ್ಸೆಂದೇ ಭಾವಿಸುತ್ತಿದ್ದರು. ತಾಯಿಯ ಎಚ್ಚರದ ಆಯ್ಕೆಯಿಂದಾಗಿ ನನ್ನ ಮಗನಿಗೆ ಮದುವೆಯಾಗುತ್ತಿಲ್ಲವೆಂದು ರೆಬ್‌ಲೆಮೆಲ್ ದೂರುತ್ತಿದ್ದ. ಬೆನ್‌ಜಿಯು ಹಣೆಯ ಮೇಲೆ ಮೊಡವೆಗಳು ಮೂಡುತ್ತಿದ್ದವು. ಹೆಣ್ಣು ಬೇಕೆಂಬ ಸೂಚನೆ ಅದು ಎಂದು ಎಲ್ಲರೂ ಹೇಳುತ್ತಿದ್ದರು, ನಾವು ಅವುಗಳನ್ನು 'ಅನುರಾಗದ ಮೊಡವೆಗಳು' ಎಂದು ಕರೆಯುತ್ತಿದ್ದೆವು.

ಒಂದು ದಿನ ಎಸ್ತರ್‌ರೋಸಾಳಿಂದ ದಾರದ ಉಂಡೆಯೊಂದನ್ನು ಸಾಲ ವಾಗಿ ತರಲು ಹೋದೆ. ಆಗ ಅವಳು ನನಗೆ ಜೆಲ್ಡೆ ನನ್ನ ಜೊತೆ ಜಮಾಸ್ಕೋಗೆ ಬರುವೆಯಾ ? ಎಂದಳು.

'ಅಲ್ಲಿ ನನಗೇನು ಕೆಲಸ ?'

'ಅದರಲ್ಲೇನು, ನೀನು ನನ್ನ ಅತಿಥಿಯಾಗಿರು' ಎಂದಳು.

ಎಸ್ತರ್‌ರೋಸಾಗೆ ಸ್ವಂತ ಗಾಡಿಯಿದ್ದಿತು. ಆದರೆ ಈ ಬಾರಿ ಅವಳು ಜಮಾಸ್ಕೋಗೆ ಹೋಗುವ ಬೇರೆಯವರ ಗಾಡಿಯಲ್ಲಿ ಹೊರಟಳು. ಅವಳು ಹುಡುಗಿಯನ್ನು ನೋಡಲು ಹೋಗುತ್ತಿರಬಹುದೆಂದು ನಾನು ಊಹಿಸಿದೆ. ಆದರೆ ಆ ಬಗ್ಗೆ ಅವಳನ್ನು ನಾನು ಕೇಳಲಿಲ್ಲ. ಏಕೆಂದರೆ ಯಾರೂ ಅವಳಿಗೆ ಪ್ರಶ್ನೆಗಳನ್ನು ಕೇಳಬಾರದು, ಅವಳ ಸ್ವಭಾವವೇ ಅಂಥದು. ಅವಳಾಗಿ ಹೇಳಿದರೆ ಸರಿ, ಇಲ್ಲದಿದ್ದರೆ ಅದಕ್ಕಾಗಿ ಕಾಯಬೇಕು ಅಷ್ಟೆ. ನಾನು ಪ್ರಯಾಣದ ಬಗ್ಗೆ ನನ್ನ ತಾಯಿಗೆ ಹೇಳಲು ಹೋದೆ. ನನ್ನ ಗಂಡನನ್ನು ಕೇಳುವ ಅಗತ್ಯವಿರಲಿಲ್ಲ.

ಆತ ದಿನವಿಡೀ ಅಧ್ಯಯನ ಮಂದಿರದಲ್ಲಿರುತ್ತಿದ್ದ. ರಾತ್ರಿ ಮನೆಗೆ ಬಂದಾಗ ಅಮ್ಮನೇ ಅವನಿಗೆ ಊಟ ಬಡಿಸುತ್ತಿದ್ದಳು. ಆ ದಿನಗಳಲ್ಲಿ ತಾಲಮುದ್ ಪವಿತ್ರಗ್ರಂಥ ಓದುವ ವಿದ್ವಾಂಸನಿಗೆ ಹೆಂಡತಿಯಿದ್ದಾಳೆಂಬ ನೆನಪೂ ಇರುತ್ತಿರಲಿಲ್ಲ. ಆಕಸ್ಮಾತ್ ನಾನು ಬೀದಿಯಲ್ಲಿ ಆತನಿಗೆದುರಾಗಿ ಸಿಕ್ಕಿದರೆ ಆತ ನನ್ನನ್ನು ಗುರ್ತಿಸುತ್ತಾನೆಂಬುದರ ಬಗ್ಗೆ ನನಗೆ ಅನುಮಾನವಿತ್ತು. ನಾನು ನನ್ನ ಉಡುಪುಗಳನ್ನು ತೆಗೆದುಕೊಂಡು ಪ್ರಯಾಣಕ್ಕೆ ಸಿದ್ಧಳಾದೆ. ನಾವು ಕುಲೀನ ಮನೆತನದವನೊಬ್ಬನ ಗಾಡಿಯಲ್ಲಿ ಹೊರಟೆವು. ಅವನೇ ಗಾಡಿ ನಡೆಸುತ್ತಿದ್ದ. ಗಾಡಿಯ ಆ ಎರಡು ಕುದುರೆಗಳು ಎರಡು ಸಿಂಹಗಳಂತಿದ್ದುವು. ರಸ್ತೆಯೂ ಚೆನ್ನಾಗಿತ್ತು. ಜಮೋಸ್ಕೀ ತಲುಪಿದಾಗ ಆತ ನಮ್ಮನ್ನು ಮಾರ್ಕೆಟ್ ಪ್ರದೇಶದಲ್ಲಿ ಇಳಿಸದೆ ಸುಸಂಸ್ಕೃತರು ವಾಸಿಸುವ ಪಕ್ಕದ ಬೀದಿಯಲ್ಲಿ ಇಳಿಸಿದ. ಎಸ್ತರ್‌ರೋಸಾ ಅವನಿಗೆ ಕೃತಜ್ಞತೆ ಅರ್ಪಿಸಿದಾಗ ಆತ ಮುಗುಳ್ನಕ್ಕು ತನ್ನ ಟೋಪಿ ತೆಗೆದು ವಂದಿಸಿ ಹೊರಟು ಹೋದ. ಈ ಎಲ್ಲವೂ ಮೊದಲೇ ಯೋಜಿತಗೊಂಡಿದ್ದಂತೆ ನನಗೆ ತೋರಿತು.

ಹೊರಗೆ ಹೋಗುವಾಗ ನಿಯಮವೆಂಬಂತೆ ಎಸ್ತರ್ ರೋಸಾ ಒಳ್ಳೆಯ ಉಡುಪುಗಳನ್ನು ಧರಿಸುತ್ತಿದ್ದಳು. ಎಲ್ಲಿಗೇ ಹೋಗಲಿ ರಾಣಿಯಂತೆ ಸಿಂಗರಿಸಿಕೊಳ್ಳುತ್ತಿದ್ದಳು. ಆದರೆ ಈ ಬಾರಿ ಅವಳು ಸಾಮಾನ್ಯ ಹತ್ತಿ ಬಟ್ಟೆಗಳನ್ನು ತೊಟ್ಟಿದ್ದಳು. ರೇಷ್ಮೆ ಲೇಸುಗಂಟಿಗೆ ಬದಲಾಗಿ ಕರವಸ್ತ್ರದಿಂದ ಕೂದಲು ಕಟ್ಟಿದ್ದಳು. ಅದು ಬೇಸಿಗೆಯ ದಿನಗಳಾಗಿದ್ದು ಹಗಲು ಅತ್ಯಂತ ದೀರ್ಘವಾಗಿತ್ತು. ನಾವು ಮಾರ್ಕೆಟ್ ಪ್ರದೇಶಕ್ಕೆ ನಡೆದೇ ಹೋದೆವು. ಎಸ್ತರ್ ರೋಸಾ ದಾರಿಯಲ್ಲಿ ಹೋಗುತ್ತಿದ್ದ ಹೆಂಗಸೊಬ್ಬಳನ್ನು ರೆಬ್‌ಜೆರಿಷ್ ಎಪ್ಲಿನರ್ನ ಅಂಗಡಿ ಎಲ್ಲಿ ಎಂದು ವಿಚಾರಿಸಿದಳು. ಅವಳು ಒಂದು ದೊಡ್ಡ ಅಂಗಡಿಯನ್ನು ನಮಗೆ ತೋರಿಸಿದಳು. ಇತ್ತೀಚಿನ ದಿನಗಳಲ್ಲಿ ದಾರ, ಉಲ್ಲನ್ ಮಾರುವ ಅಂಗಡಿಗಳಲ್ಲಿ ವಿವಿಧ ವಸ್ತುಗಳು ನಿಮಗೆ ಸಿಗಲಿಕ್ಕಿಲ್ಲ. ಆದರೆ ಆ ದಿನಗಳಲ್ಲಿ ಹಾಗಲ್ಲ, ಎಲ್ಲ ವಸ್ತುಗಳೂ ಸಿಗುತ್ತಿದ್ದುವು. ದೊಡ್ಡ ಪಟ್ಟಣಗಳಲ್ಲಿರುವಂತೆ ಅಂಗಡಿಯಲ್ಲಿ ಎತ್ತರದ ಮೇಜಿನ ಹಿಂದೆ ಕುಳಿತು ಒಬ್ಬ ವ್ಯಕ್ತಿ ಖಾತೆಪುಸ್ತಕದಲ್ಲಿ ಏನನ್ನೋ ಬರೆಯುತ್ತಿದ್ದ. ಅವನು ಲೆಕ್ಕ ಬರೆಯುವವನೋ ಕ್ಯಾಷಿಯರೋ ನನಗೆ ಗೊತ್ತಾಗಲಿಲ್ಲ. ಕೌಂಟರಿನಲ್ಲಿ ಕಪ್ಪು ಕಣ್ಣಿನ ಹುಡುಗಿಯೊಬ್ಬಳು ನಿಂತಿದ್ದಳು.

ಅವಳ ಕಣ್ಣುಗಳು ಬೆಂಕಿಯಂತೆ ಹೊಳೆಯುತ್ತಿದ್ದುವು. ಇಡೀ ಅಂಗಡಿಗೆ ನಾವೇ ಗಿರಾಕಿಗಳಾಗಿದ್ದು, ನಾವು ಅವಳ ಬಳಿ ಹೋದೆವು. ಅವಳು ಏನು ಬೇಕು ನಿಮಗೆ? ಎಂದು ಕೇಳಿ ಈ ಊರಿಗೆ ನೀವು ಹೊಸಬರೆಂದು ಕಾಣುತ್ತದೆ ಎಂದಳು.

'ಹೌದು' ಎಂದಳು ಎಸ್ತರ್‌ರೋಸಾ.

'ಏನು ನೋಡಲು ಇಷ್ಟಪಡುತ್ತೀರಿ ?' ಹುಡುಗಿ ಕೇಳಿದಳು.

'ಒಂದು ಸೂಜಿ' ಎಸ್ತರ್ ಉತ್ತರಿಸಿದಳು.

'ಸೂಜಿ' ಎಂಬ ಪದ ಕೇಳಿದ ತಕ್ಷಣವೇ ಹುಡುಗಿಯ ಮುಖದ ಬಣ್ಣವೇ ಬದಲಾಯಿತು. ಅವಳ ಕಣ್ಣುಗಳಲ್ಲಿ ಕೋಪ ತುಳುಕಿತು. 'ಒಂದು ಸೂಜಿಗೆ ಇಬ್ಬರು ಹೆಂಗಸರು ?'

ಸೂಜಿ ದುರದೃಷ್ಟದ ಸಂಕೇತವೆಂದು ವ್ಯಾಪಾರಿಗಳ ನಂಬಿಕೆ. ವಾರದ ಆರಂಭದಲ್ಲಿ ಯಾರೂ ಸೂಜಿಕೊಳ್ಳುವ ಧೈರ್ಯ ಮಾಡುತ್ತಿರಲಿಲ್ಲ. ಹಾಗೆ ಕೊಂಡರೆ ವಾರವಿಡೀ ಒಳ್ಳೆಯ ವ್ಯಾಪಾರವಾಗುವುದಿಲ್ಲವೆಂಬುದು ಪ್ರಚಲಿತದಲ್ಲಿತ್ತು. ವ್ಯಾಪಾರಿಗಳು ವಾರದ ಮಧ್ಯದಲ್ಲಿಯೂ ಸಹ ಸೂಜಿ ಮಾರಲು ಇಚ್ಛಿಸುತ್ತಿರಲಿಲ್ಲ. ಉಲ್ಲನ್ ದಾರ, ಗುಂಡಿಗಳನ್ನು ಕೊಂಡವರಿಗೆ, ಇವರು ಕೇಳದಿದ್ದರೂ ಸಹ ಒಂದು ಸೂಜಿಯನ್ನು ಉಚಿತವಾಗಿ ಕೊಟ್ಟು ಬಿಡುತ್ತಿದ್ದರು. ಒಂದು ಸೂಜಿ ಅರ್ಧ ಪೆನ್ನಿ ಬೆಲೆಯದಾಗಿದ್ದು, ಅಷ್ಟು ಸಣ್ಣ ವ್ಯಾಪಾರ ಮಾಡುವುದು ಅರ್ಥವಿಲ್ಲದ್ದಾಗಿತ್ತು.

'ಹೌದು' ಎಂದಳು ಎಸ್ತರ್‌ರೋಸಾ. 'ನಮಗೆ ಬೇಕಾಗಿರುವುದು ಒಂದು ಸೂಜಿ ಮಾತ್ರ.' ಹುಡುಗಿ ಹುಬ್ಬುಗಂಟಿಕ್ಕಿ ಸೂಜಿಗಳ ಪೆಟ್ಟಿಗೆ ತಂದು ನಮ್ಮ ಮುಂದಿರಿಸಿದಳು. ಎಸ್ತರ್‌ರೋಸಾ ಆ ಸೂಜಿಗಳನ್ನೆಲ್ಲಾ ಪರೀಕ್ಷಿಸಿ 'ಬೇರೆ ಸೂಜಿಗಳಿಲ್ಲವೇ ?' ಎಂದು ಕೇಳಿದಳು.

'ಇವು ಏನಾಗಿವೆ ?' ಎಂದು ಆ ಹುಡುಗಿ ಅಸಮಾಧಾನದಿಂದಲೇ ಕೇಳಿದಳು.

'ಅವುಗಳ ಕಣ್ಣು ತೀರಾ ಚಿಕ್ಕದಾಗಿವೆ. ದಾರ ಪೋಣಿಸುವುದು ಕಷ್ಟವಾಗುತ್ತದೆ' ಎಂದಳು ಎಸ್ತರ್‌ರೋಸಾ.

ನಮ್ಮಲ್ಲಿರುವುದು ಇಷ್ಟೇ ಎಂದು ಸಿಡುಕಿದ ಹುಡುಗಿ ಕಣ್ಣು ಸರಿ ಕಾಣಿಸದಿದ್ದರೆ ಕನ್ನಡಕವನ್ನೇಕೆ ಕೊಂಡುಕೊಳ್ಳಬಾರದು ? ಎಂದಳು.

ನಿಮ್ಮಲ್ಲಿ ಬೇರೆ ಸೂಜಿಗಳು ಇಲ್ಲವೆನ್ನುತ್ತೀರಾ ? ನನಗೆ ದೊಡ್ಡ ಕಣ್ಣಿನ ಸೂಜಿ ಬೇಕಾಗಿತ್ತು ಎಸ್ತರ್‌ರೋಸಾ ಮತ್ತೆ ಕೇಳಿದಳು.

ಹುಡುಗಿ ದುರುಗುಟ್ಟಿ ನೋಡಿ ಮತ್ತೊಂದು ಪೆಟ್ಟಿಗೆಯನ್ನು ತಂದು ನಮ್ಮ ಮುಂದೆ ದೂಡಿದಳು. ಎಸ್ತರ್‌ರೋಸಾ ಆ ಪೆಟ್ಟಿಗೆಯ ಸೂಜಿಗಳನ್ನು ಪರೀಕ್ಷಿಸಿ ನಂತರ 'ಇವುಗಳ ಕಣ್ಣು ಸಹ ದೊಡ್ಡದಾಗಿಲ್ಲ' ಎಂದಳು.

ಮೇಜಿನ ಹಿಂದಿದ್ದ ಮನುಷ್ಯ 'ನಿಮಗೆ ಬಹುಶಃ ಗೋಣಚೀಲ ಹೊಲಿಯುವ ದಬ್ಬಳ ಬೇಕೆಂದು ಕಾಣಿಸುತ್ತದೆ.' ಎಂದು ಹೇಳಿ ದೊಡ್ಡದಾಗಿ ನಕ್ಕ. 'ಇದ್ದಿರಬೇಕು, ಅರ್ಧ ಪೆನ್ನಿ ವ್ಯಾಪಾರಕ್ಕಾಗಿ ನಮ್ಮನ್ನು ಗೋಳು ಹೊಯ್ದುಕೊಳ್ಳುತ್ತಾರೆ' ಎಂದು ಹುಡುಗಿ ಗೊಣಗಿದಳು.

'ನನಗೆ ಗೋಣಿಚೀಲ ಹೊಲೆಯುವ ದಬ್ಬಳ ಬೇಕಾಗಿಲ್ಲ, ಹಾಗೆಯೇ ಗೋಣಿಚೀಲದಂತೆ ಒರಟಾಗಿರುವ ಹುಡುಗಿಯೂ ಬೇಕಾಗಿಲ್ಲ' ಎಂದು ಹೇಳಿದ ಎಸ್ತರ್‌ರೋಸಾ 'ಬಾ ಜೆಲ್ಕಿ ಇವರು ನಮಗೆ ಬೇಕಿಲ್ಲದ ಜನ' ಎಂದು ಹೊರಟಳು.

ಹುಡುಗಿಯ ಮುಖ ಕೋಪದಿಂದ ಕೆಂಪಾಯಿತು. 'ಎಂಥ ಕೆಟ್ಟ ಜನ' ಎಂದು ಅವಳು ಜೋರಾಗಿಯೇ ಹೇಳಿದಳು.

ನಾವು ಹೊರಬಂದೆವು. ಇಡೀ ಪ್ರಸಂಗ ನನಗೆ ಕಹಿ ಅನುಭವ ನೀಡಿತ್ತು. ಎಸ್ತರ್‌ರೋಸಾ ಪಕ್ಕದಲ್ಲಿ ಹೋಗುವ ಹೆಂಗಸೊಬ್ಬಳನ್ನು ರೆಬ್‌ಜೆಲಿಸ್ ಅಂಗಡಿ ಎಲ್ಲಿ ಎಂದು ವಿಚಾರಿಸಿದಳು. ಇದೇ ರಸ್ತೆಯಲ್ಲಿ ಬಲಗಡೆ ಸಿಗುತ್ತದೆ ಎಂದು ಅವಳು ಕೈಮಾಡಿ ತೋರಿಸಿದಳು. ನಾವು ರಸ್ತೆ ದಾಟಿ ಆ ಅಂಗಡಿಗೆ ಹೋದೆವು. ಇದು ಮೊದಲಿನ ಅಂಗಡಿಯ ಮೂರನೆಯ ಒಂದು ಭಾಗದಷ್ಟು ಚಿಕ್ಕದಾಗಿತ್ತು. ಇಲ್ಲೂ ಸಹ ತರುಣಿಯಾದ ಮಾರಾಟದ ಹುಡುಗಿಯಿದ್ದಳು. ಕೆಂಪುಕೂದಲು, ಮುಖದ ಮೇಲೆ ಮಚ್ಚೆಯಿತ್ತು. ಚಂದವಿಲ್ಲ ಎಂದು ಹೇಳಲು ಬರದಿದ್ದರೂ ಚೆಲುವೆ ಎನ್ನುವುದು ಸಾಧ್ಯವಿರಲಿಲ್ಲ. 'ನಿಮ್ಮಲ್ಲಿಸೂಜಿಗಳನ್ನು ಮಾರುತ್ತೀರಾ?' ಎಂದು ಎಸ್ತರ್‌ರೋಸಾ ಕೇಳಿದಳು. 'ಯಾಕಿಲ್ಲ ? ಎಲ್ಲವನ್ನೂ ಮಾರುತ್ತೇವೆ' ಎಂದು ಆ ಹುಡುಗಿ ಉತ್ತರಿಸಿದಳು.

'ನನಗೆ ದೊಡ್ಡ ಕಣ್ಣಿನ ಸೂಜಿ ಬೇಕಾಗಿದೆ ದಾರ ಪೋಣಿಸುವುದು ನನಗೆ ತುಂಬಾ ತೊಂದರೆ' ಎಂದಳು ಎಸ್ತರ್‌ರೋಸಾ.

'ನಾನು ನಮ್ಮಲ್ಲಿರುವ ಎಲ್ಲ ರೀತಿಯ ಸೂಜಿಗಳನ್ನೂ ತೋರಿಸುತ್ತೇನೆ. ನಿಮಗೆ ಬೇಕಾದುದನ್ನು ನೀವು ಆಯ್ದುಕೊಳ್ಳಿರಿ' ಎಂದಳು ಹುಡುಗಿ.

ನನಗೆ ಏನು ನಡೆಯುತ್ತಿದೆ ಎಂಬುದು ಅರ್ಥವಾಯಿತು. ನನ್ನ ಹೃದಯದ ಬಡಿತ ಜೋರಾಯಿತು. ಹುಡುಗಿ ಸೂಜಿಗಳ ಹತ್ತಾರು ಪೆಟ್ಟಿಗೆಗಳನ್ನು ತಂದು ನಮ್ಮ ಮುಂದಿರಿಸಿದಳು. 'ಏಕೆ ನಿಂತಿದ್ದೀರಿ ?' ಎಂದು ಹೇಳಿ ಕುರ್ಚಿಯನ್ನು ತಂದು ಹಾಕಿದಳು. ನನಗೂ ಒಂದು ಕುರ್ಚಿ ತಂದಿಟ್ಟಳು. ಎಸ್ತರ್‌ರೋಸಾ ಇವಳನ್ನೂ ಪರೀಕ್ಷಿಸುತ್ತಿದ್ದಾಳೆ ಎಂದು ನನಗೆ ಖಚಿತವಾಗಿತ್ತು.

'ಸೂಜಿಗಳೆಲ್ಲಾ ಏಕೆ ಒಂದರೊಳಗೊಂದು ಬೆರೆತು ಹೋಗಿವೆ ?' ಎಸ್ತರ್ ರೋಸಾ ದೂರಿದಳು. ಪ್ರತಿಯೊಂದು ಅಳತೆಯ ಸೂಜಿಗಳೂ ಬೇರೆ ಬೇರೆಯೇ ಇರಬೇಕು. 'ಫ್ಯಾಕ್ಟರಿಯಿಂದ ಬಂದಾಗ ಎಲ್ಲವನ್ನೂ ವಿಭಾಗಿಸಿರುತ್ತೇವೆ. ಮತ್ತೆ ಅವು ಬೆರೆತು ಹೋಗುತ್ತವೆ' ಹುಡುಗಿ ಕ್ಷಮೆ ಯಾಚಿಸುವ ದನಿಯಲ್ಲಿ ಹೇಳಿದಳು. ಅವಳು ತಾಳ್ಮೆ ಕಳೆದುಕೊಳ್ಳುವಂತೆ ಮಾಡುವುದು ಎಸ್ತರ್‌ಳ ಉದ್ದೇಶವೆಂಬುದು ನನಗೆ ಸ್ಪಷ್ಟವಾಯಿತು. 'ಇಲ್ಲಿ ಕತ್ತಲು, ನನಗೆ ಸರಿ ಕಾಣಿಸುವುದಿಲ್ಲ' ಎಂದಳು ಎಸ್ತರ್‌ರೋಸಾ.

'ಒಂದು ನಿಮಿಷ ತಡೆಯಿರಿ. ಕುರ್ಚಿಗಳನ್ನು ಬಾಗಿಲ ಬಳಿ ಸರಿಸುತ್ತೇನೆ. ಅಲ್ಲಿ ಹೆಚ್ಚು ಬೆಳಕಿದೆ' ಎಂದಳು ಹುಡುಗಿ.

'ಅರ್ಧ ಪೆನ್ನಿ ಸೂಜಿಗಾಗಿ ಇಷ್ಟೆಲ್ಲ ಶ್ರಮ ತೆಗೆದುಕೊಳ್ಳುವುದು ವ್ಯರ್ಥವಲ್ಲವೇ' ಎಸ್ತರ್‌ರೋಸಾ ಕೇಳಿದಳು. 'ತಾಲಮುದ್ ಪವಿತ್ರಗ್ರಂಥದಲ್ಲಿ ಹೇಳುವಂತೆ ನೂರು ಗಿಲ್ಡರ್ಸ್ ವಸ್ತುವನ್ನು ಮಾರಲೂ ಅನ್ವಯಿಸುವ ನಿಯಮಗಳೇ ಅರ್ಧ ಪೆನ್ನಿಯಲ್ಲ, ಕಾಲು ಪೆನ್ನಿ ಬೆಲೆಯ ಸೂಜಿ ಮಾರಲು ಅನ್ವಯಿಸುತ್ತವೆ. ಅದೂ ಅಲ್ಲದೆ, ನೀವು ಇಂದು ಕೇವಲ ಒಂದು ಸೂಜಿ ಕೊಳ್ಳಬಹುದು. ನಾಳೆ ಸ್ಯಾಟಿನ್ ಬಟ್ಟೆಯನ್ನೇ ಖರೀದಿಸಬಹುದು' ವಿವರಣೆ ನೀಡಿದಳು ಹುಡುಗಿ.

ಓಹೋ, ಹಾಗೋ ! ಹಾಗಾದರೆ ಅಂಗಡಿಯೇಕೆ ಖಾಲಿಯಿದೆ ? ರಸ್ತೆಯ ಆ ಬದಿಯಲ್ಲಿರುವ ಬೆರಿಷ್ ಲುಬ್ಲಿನರ್ಸ್ ಅಂಗಡಿ ತುಂಬಿ ತುಳುಕುತ್ತಿದೆ. ಸೂಜಿ

ಹಾಕಲೂ ಜಾಗವಿಲ್ಲ. ನಾನೂ ಅನೇಕ ವಸ್ತುಗಳನ್ನು ಅಲ್ಲಿಯೇ ಕೊಂಡುಕೊಂಡೆ. ಸೂಜಿಗಾಗಿ ಮಾತ್ರ ಇಲ್ಲಿ ಬಂದೆ' ಎಂದಳು ಎಸ್ತರ್‌ರೋಸಾ.

ಹುಡುಗಿ ಗಂಭೀರಳಾದಳು. ಎಸ್ತರ್‌ರೋಸಾ ಗುರಿಸಾಧಿಸಿದಳೆಂದು ನನಗೆ ಭಯವಾಯಿತು. ದೇವತೆ ಸಹ ಇಂತಹ ಸಂದರ್ಭದಲ್ಲಿ ತಾಳ್ಮೆ ಕಳೆದುಕೊಳ್ಳಬೇಕು. ಆದರೆ ಹುಡುಗಿ ಸಹಜ ಸಮಾಧಾನದಿಂದ 'ಎಲ್ಲ ದೇವರ ಇಚ್ಛೆ' ಎಂದಳು. ಎಸ್ತರ್‌ರೋಸಾ ತನ್ನ ಕುರ್ಚಿಯನ್ನು ಸರಿಸಲು ಮುಂದಾದಳು. ಹುಡುಗಿ ತಕ್ಷಣ 'ದಯವಿಟ್ಟು ತೊಂದರೆ ತೆಗೆದುಕೊಳ್ಳಬೇಡಿ. ನಾನು ತೆಗೆದಿಡುತ್ತೇನೆ' ಎಂದು ಹೇಳಿ ಕುರ್ಚಿ ತೆಗೆಯಲು ಹೊರಟಳು. ಆಗ ಎಸ್ತರ್‌ರೋಸಾ ನಾನು ನಿನಗೊಂದು ಮಾತು ಹೇಳಬೇಕು ಎಂದಳು.

'ನನಗೆ ? ಏನು ಹೇಳಬೇಕೆಂದಿದ್ದೀರಿ ?' ಕುರ್ಚಿ ತೆಗೆದಿಡುತ್ತಾ ಹುಡುಗಿ ಕೇಳಿದಳು.

'ಪ್ರೀತಿಯ ನನ್ನ ಮಗಳೇ' ಎಸ್ತರ್‌ರೋಸಾ ಆರ್ದ್ರಳಾಗಿ ಕರೆದಳು.

ಹುಡುಗಿ ಸೀಮೆಸುಣ್ಣದಂತೆ ಬಿಳಿಚಿಕೊಂಡು 'ನನಗೆ ಅರ್ಥವಾಗುತ್ತಿಲ್ಲ' ಎಂದಳು.

'ನೀನು ನನ್ನ ಸೊಸೆಯಾಗುವೆ' ಎಸ್ತರ್‌ರೋಸಾ ಪ್ರಕಟಿಸಿದಳು. 'ನಾನು ರೂಬಿಶೋ ರೆಬ್‌ಲಿಮೆಲ್ ವ್ಯಾಗ್‌ಮೆಸ್ಟರ್‌ನ ಹೆಂಡತಿ. ನಾನು ನನ್ನ ಮಗನಿಗಾಗಿ ಹುಡುಗಿ ನೋಡಲು ಬಂದವಳು. ಸೂಜಿ ಕೊಳ್ಳಲಿಕ್ಕಲ್ಲ. ರೆಬ್‌ಜೆಲಿಸ್‌ರ ಮಗಳು ಒರಟು ಚಾಪೆಯಂತೆ. ನೀನು ನುಣುಪಾದ ಸಿಲ್ಕ್ ಬಟ್ಟೆಯಂತೆ. ನೀನು ನನ್ನ ಮಗ ಬೆನ್‌ಜಿಯ ಹೆಂಡತಿಯಾಗುವುದು ದೇವರ ಇಚ್ಛೆ' ಎಂದಳು.

ಹುಡುಗಿ ಎಚ್ಚರ ತಪ್ಪಿ ಬೀಳದಿದ್ದುದು ಒಂದು ಪವಾಡವೇ ಸರಿ. ಜಮಾಸ್ಕೋದ ಎಲ್ಲರೂ ರೆಬ್‌ಲಿಮೆಲ್ ವ್ಯಾಗ್‌ಮೆಸ್ಟರ್ ಬಗ್ಗೆ ಕೇಳಿದ್ದರು. ಜಮಾಸ್ಕೋ, ಲುಬ್ಲಿನ್‌ನಂತಲ್ಲ. ವಿಷಯ ತಿಳಿದ ಗಿರಾಕಿಗಳು ಏನಾಗುತ್ತಿದೆ ಎಂಬ ಕುತೂಹಲದಿಂದ ಅಂಗಡಿಯಲ್ಲಿ ಗುಂಪುಗೂಡಿದರು.

ಎಸ್ತರ್‌ರೋಸಾ ತನ್ನ ಬ್ಯಾಗ್‌ನಿಂದ ಬೆಲೆಬಾಳುವ ಸರವೊಂದನ್ನು ತೆಗೆದಳು. ಇದು ನಿನ್ನ ನಿಶ್ಚಿತಾರ್ಥದ ಉಡುಗೊರೆ. ತಲೆ ಬಗ್ಗಿಸು ಎಂದಳು. ಹುಡುಗಿ ವಿನಯದಿಂದ ತಲೆಬಗ್ಗಿಸಿದಳು. ಎಸ್ತರ್‌ರೋಸಾ ಅವಳ ಕೊರಳಿಗೆ ಹಾರ ಹಾಕಿ ಆಶೀರ್ವದಿಸಿದಳು. ಸುದ್ದಿ ತಿಳಿದ ಅವಳ ತಂದೆ ತಾಯಿ ಓಡಿ

ಬಂದರು. ಮಗಳನ್ನು ಅಪ್ಪಿಕೊಂಡು ಮುದ್ದಾಡಿ, ಅಪಾರ ಸಂತೋಷಪಟ್ಟರು. ಯಾರೋ ಒಬ್ಬರು ತತ್‌ಕ್ಷಣ ರೆಬ್ ಬೆರಿಷ್‌ಳ ಮಗಳಿಗೆ ಈ ಕತೆ ಹೇಳಲು ಓಡಿದರು. ಏನಾಯಿತೆಂದು ತಿಳಿದಾಗ ಅವಳ ದುಃಖದ ಕಟ್ಟೆಯೊಡೆಯಿತು. ಅವಳ ಹೆಸರು ಇಟೆ, ಅವಳ ಹೆಸರಿನಲ್ಲಿ ಅವಳ ತಂದೆ ದೊಡ್ಡ ಮೊತ್ತದ ವರದಕ್ಷಿಣೆ ಇರಿಸಿದ್ದ. ಅವಳು ಚುರುಕಾದ ಜಾಣ ಮಾರಾಟದ ಹುಡುಗಿ ಎಂದು ಹೆಸರಾಗಿದ್ದಳು. ರೆಬ್ ಜೆಲಿಸ್ ಮನೆಯವರು ಹೇಗೋ ಜೀವಿಸುತ್ತಿದ್ದರು ಅಷ್ಟೆ.

ಪ್ರಿಯ ಓದುಗರೆ, ರೆಬ್ ಲಿಮೆಲ್ ವ್ಯಾಗ್‌ಮೆಸ್ಟರ್ ಮನೆಗೆ ಎಸ್ತರ್ ರೋಸಾಳೇ ಯಜಮಾನಿ. ಅವಳು ಹೇಳಿದಂತೆಯೇ ಎಲ್ಲ ನಡೆಯಿತು. ನಾನು ಮೊದಲೇ ಹೇಳಿದ ಹಾಗೆ ಆ ದಿನಗಳಲ್ಲಿ ಮದುವೆಗೆ ಮುನ್ನ ಮಕ್ಕಳ ಒಪ್ಪಿಗೆಯನ್ನು ಯಾರೂ ಕೇಳುತ್ತಿರಲಿಲ್ಲ. ನಿಶ್ಚಿತಾರ್ಥದ ಸಮಾರಂಭ ಮುಗಿದು, ಮದುವೆಯೂ ಬೇಗನೇ ನಡೆಯಿತು. ರೆಬ್ ಜೆಲಿಸ್ ಅದ್ದೂರಿಯಾಗಿ ಮದುವೆ ಮಾಡುವುದು ಸಾಧ್ಯವಿರಲಿಲ್ಲ. ಅವನಿಗೆ ಇವಳಲ್ಲದೆ ಇನ್ನೂ ಇಬ್ಬರು ಹೆಣ್ಣು ಮಕ್ಕಳು ಹಾಗೂ ಇಬ್ಬರು ಗಂಡು ಮಕ್ಕಳಿದ್ದರು. ಅವರು ಯೆಶೀವಾದಲ್ಲಿ ಓದುತ್ತಿದ್ದರು. ಹೀಗಾಗಿ ಹೆಚ್ಚು ವರದಕ್ಷಿಣೆ ಕೊಡುವುದೂ ಸಹ ಆತನಿಗೆ ಸಾಧ್ಯವಿರಲಿಲ್ಲ. ನಿಮಗೇ ಗೊತ್ತಿರುವ ಹಾಗೆ ರೆಬ್ ಲಿಮೆಲ್ ಮನೆಯವರಿಗೂ ಸಹ ವರದಕ್ಷಿಣೆಯ ಅಗತ್ಯವಿರಲಿಲ್ಲ. ನಾನು ನಿಶ್ಚಿತಾರ್ಥಕ್ಕೆ ಹೋಗಿದ್ದೆ. ಮದುವೆಯಲ್ಲಿ ನೃತ್ಯಕೂಟದಲ್ಲಿ ಭಾಗವಹಿಸಿದ್ದೆ. ಎಸ್ತರ್ ರೋಸಾ ಹುಡುಗಿಯನ್ನು ರಾಜಕುಮಾರಿಯಂತೆ ಸಿಂಗರಿಸಿದ್ದಳು. ಅವಳು ಈಗ ನಿಜಕ್ಕೂ ಚೆಲುವೆಯಾಗಿ ಕಾಣುತ್ತಿದ್ದಳು. ಬದುಕಿನಲ್ಲಿ ಅದೃಷ್ಟದ ಬೆಳಕು ಚೆಲ್ಲಿದಾಗ ಸಹಜವಾಗಿ ಅದು ಮುಖಕ್ಕೆ ಕಾಂತಿ ಮೂಡಿಸುತ್ತದೆ. ಮದುವೆ ಮಂಟಪದಲ್ಲಿ ಆ ಯುವ ಜೋಡಿಯನ್ನು ನೋಡದಿದ್ದವರು. ನೃತ್ಯಕೂಟದಲ್ಲಿ ಭಾಗವಹಿಸದಿದ್ದವರು ಆ ತರುಣ ಜೋಡಿಯ ಸಂತೋಷವನ್ನು ಊಹಿಸಿಕೊಳ್ಳುವುದು ಕಷ್ಟ. ಅವರು ಜೋಡಿ ಪಾರಿವಾಳಗಳಂತೆ ಉಲ್ಲಾಸದಿಂದಿದ್ದರು. ವರ್ಷದೊಳಗಾಗಿ ಅವಳು ಮಗುವೊಂದಕ್ಕೆ ಜನ್ಮ ನೀಡಿದಳು.

ಎಸ್ತರ್ ರೋಸಾ ತನ್ನನ್ನು ಪರೀಕ್ಷಿಸಲು ಬಂದಿದ್ದಳು ಎಂದು ತಿಳಿದಂದಿನಿಂದ ಇಟೆ ಅಸ್ವಸ್ಥಳಾದಳು. ಅವಳು ಎಸ್ತರ್ ರೋಸಾಳ ಭೇಟಿಯ ಬಗ್ಗೆಯೇ ಯಾವಾಗಲೂ ಮಾತನಾಡುತ್ತಿದ್ದಳು. ಗಿರಾಕಿಗಳಿಗೆ ಸರಿಯಾಗಿ ಗಮನಕೊಡು

ತ್ತಿರಲಿಲ್ಲ. ಹಗಲೂ ರಾತ್ರಿ ಅಳುತ್ತಿದ್ದಳು. ಮದುವೆ ಮಾಡಿಸುವ ಮಧ್ಯಸ್ಥ
ಗಾರರು ಅನೇಕ ಹುಡುಗರನ್ನು ಅವಳಿಗೆ ತೋರಿಸುತ್ತಿದ್ದರು. ಮೊದಮೊದಲು
ಅವಳೇ ನಿರಾಕರಿಸುತ್ತಿದ್ದಳು. ಈಗ ಅವಳಿಗೇ ಕೆಟ್ಟ ಹೆಸರು ಬಂದಿತ್ತು. ಜನ
ಸಂಗತಿಗಳನ್ನು ಹೇಗೆ ಉತ್ಪ್ರೇಕ್ಷಿಸಿ ಮಾತನಾಡುತ್ತಾರೆಂದು ನಿಮಗೆ ಗೊತ್ತು.
ಎಲ್ಲ ರೀತಿಯ ಸುಳ್ಳುಗಳೂ ಅವಳ ಬಗ್ಗೆ ಹಬ್ಬಿದವು. ಎಸ್ತರ್‌ರೋಸಾಳನ್ನು
ಅವಳು ಅವಮಾನಿಸಿದಳು, ಅವಳ ಮೇಲೆ ಉಗುಳಿದಳು, ಅವಳಿಗೆ ಹೊಡೆದಳು
ಎಂದೆಲ್ಲ ಜನ ಹೇಳಲಾರಂಭಿಸಿದರು. ಇಟೆಯ ತಂದೆ ಹಣವುಳ್ಳವನಾಗಿದ್ದ. ಆ
ಸಣ್ಣ ಪಟ್ಟಣದಲ್ಲಿ ಪ್ರತಿಯೊಬ್ಬನೂ ತನ್ನ ನೆರೆಯವನ ಸುಖದ ಬಗ್ಗೆ ಕರು
ಬುತ್ತಿದ್ದ. ಈಗ ಅವನಿಗಾಗದವರು ಆಡಿಕೊಳ್ಳಲು ಅವಕಾಶ ಸಿಕ್ಕಿತು. ಇಟೆ
ನಿಜವಾಗಿಯೂ ಚತುರ ಮಾರಾಟದ ಹುಡುಗಿಯಾಗಿದ್ದಳು. ಅವಳ ನಿರಾಸಕ್ತಿ
ಯಿಂದಾಗಿ ಅಂಗಡಿಯ ವ್ಯಾಪಾರ ಸ್ಥಗಿತಗೊಂಡಿತು. ಕೆಲವು ದಿನಗಳ ಬಳಿಕ
ಅವಳು ಲುಬ್ಲಿನ್‌ನ ಒಬ್ಬ ವ್ಯಕ್ತಿಯನ್ನು ಮದುವೆಯಾದಳು. ಅವನೇನೂ
ಅಂತಹ ಸಭ್ಯವ್ಯಕ್ತಿಯಾಗಿರಲಿಲ್ಲ. ಈಗಾಗಲೇ ಮದುವೆಯಾಗಿದ್ದು ಮೊದಲನೇ
ಹೆಂಡತಿಯಿಂದ ವಿಚ್ಛೇದನ ಪಡೆದಿದ್ದ. ಅವನು ಜಮಾಸ್ಕೋಗೆ ಬಂದು ತನ್ನ
ಮಾವನ ಅಂಗಡಿಯ ವಹಿವಾಟು ವಹಿಸಿಕೊಂಡ. ಆದರೆ ನಾನು ಎಂತಹ
ಸಂಗೀತಗಾರಳೋ ಅವನೂ ಅಂತಹ ವ್ಯಾಪಾರಿಯಾಗಿದ್ದ.

ಹೀಗೆಯೇ ಘಟನೆಗಳು ನಡೆಯುವುದು. ಅದೃಷ್ಟವಿದ್ದಾಗ ಎಲ್ಲವೂ
ಸರಿಯಿರುತ್ತದೆ.. ಇಲ್ಲದಿದ್ದಾಗ ಎಲ್ಲವೂ ಹದ ತಪ್ಪುತ್ತದೆ. ಇಟೆಯ ತಾಯಿ
ತೀವ್ರ ಅಸ್ವಸ್ಥಳಾಗಿ ರೋಗ ಪೀಡಿತಳಾದಳು. ಕಾಮಾಲೆ ರೋಗದಿಂದಾಗಿ
ಅವಳ ಮುಖ ಸಂಪೂರ್ಣ ಹಳದಿಯಾಯಿತು. ಇಟೆ ಅಂಗಡಿಗೆ ಬರುವು
ದನ್ನು ಸಂಪೂರ್ಣ ನಿಲ್ಲಿಸಿ ಮನೆಯಲ್ಲೇ ಇರುತ್ತಿದ್ದಳು. ಅವಳು ಸರಿ
ಹೋಗಬಹುದೆಂದು ಭಾವಿಸಲಾಗಿತ್ತು. ಆದರೆ ಎರಡು ಬಾರಿ ಗರ್ಭಪಾತ
ವಾಯಿತು. ಅರೆಹುಚ್ಚಳಾದಂತಾಗಿ ಅವಳು ಸದಾ ಫ್ರೈಡಾಗಿಟ್ಟೆಲ್-ಬೆನ್‌ಜಿಯ
ಹೆಂಡತಿಯ ಹೆಸರನ್ನು ಹೇಳಿ ಶಪಿಸುತ್ತಿದ್ದಳು. ಅವಳಿಂದಾಗಿಯೇ ತನಗೆ ಈ ಸ್ಥಿತಿ
ಬಂತೆಂದು ದೂರುತ್ತಿದ್ದಳು. ಹುಚ್ಚರ ತಲೆಯಲ್ಲಿ ಏನೇನಿರುತ್ತದೆಂದು ಯಾರು
ಬಲ್ಲರು ? ಫ್ರೈಡಾಗಿಟ್ಟೆಲ್ ಸಾಯುತ್ತಾಳೆಂದೂ, ನಂತರ ಅವಳ ಸ್ಥಾನವನ್ನು
ತಾನು ಪಡೆಯುತ್ತೇನೆಂದೂ ಇಟೆ ಹೇಳುತ್ತಿದ್ದಳು. ಇಟೆ ಮೂರನೆಯ ಸಾರಿ

ಗರ್ಭಿಣಿಯಾದಾಗ ಅವಳನ್ನು ಅವಳ ತಂದೆ ಮಂತ್ರವಾದಿಯ ಬಳಿ ಕರೆದುಕೊಂಡು ಹೋದ. ನಾನು ಹೇಳುವುದನ್ನು ಮರೆತೆ, ಈ ವೇಳೆಗಾಗಲೇ ಅವಳ ತಾಯಿ ತೀರಿಕೊಂಡಿದ್ದಳು. ಮಂತ್ರವಾದಿಯ ಪ್ರಯತ್ನವೂ ಫಲಕಾರಿಯಾಗಲಿಲ್ಲ. ಮತ್ತೆ ಅವಳಿಗೆ ಗರ್ಭಪಾತವಾಯಿತು. ಅನೇಕ ರೀತಿಯ ಕಾಯಿಲೆಗಳನ್ನು ಕಲ್ಪಿಸಿಕೊಂಡು ಅವಳು ವೈದ್ಯರ ಬಳಿ ಹೋಗಲಾರಂಭಿಸಿದಳು.

ಈಗ ಮುಂದೆ ಕೇಳಿ : ಒಂದು ಸಂಜೆ ಇಟೆ ತನ್ನ ಕೊಠಡಿಯಲ್ಲಿ ಕುಳಿತು ಬಟ್ಟೆ ಹೊಲಿಯುತ್ತಿದ್ದಳು. ಸೂಜಿಗೆ ಪೋಣಿಸಿದ್ದ ದಾರ ಮುಗಿದು ಹೋಗಿ ಮತ್ತೆ ಬೇರೆ ದಾರ ಪೋಣಿಸಬೇಕಾಗಿತ್ತು. ದಾರದ ಉಂಡೆ ತೆಗೆದುಕೊಳ್ಳಲು ಅವಳು ಸೂಜಿಯನ್ನು ತನ್ನ ತುಟಿಗಳ ಮಧ್ಯೆ ಇಟ್ಟುಕೊಂಡಳು. ತತ್‌ಕ್ಷಣ ಗಂಟಲಿನಲ್ಲಿ ಏನೋ ಚುಚ್ಚಿದಂತಾಗಿ ಸೂಜಿ ಕಾಣೆಯಾಯಿತು. ಅವಳು ಸೂಜಿಗಾಗಿ ತುಂಬಾ ಹುಡುಕಾಡಿದಳು. ಆದರೆ ಅದೆಲ್ಲಿ ಸಿಗುತ್ತದೆ ? 'ಹುಲ್ಲುಮೆದೆಯಲ್ಲಿ ಸೂಜಿ ಹುಡುಕಿದಂತೆ' ಎಂಬ ಗಾದೆಯೇ ಇಲ್ಲವೆ. ಹೊಟ್ಟೆಯಲ್ಲಿ, ಎದೆಯಲ್ಲಿ, ಕಾಲುಗಳಲ್ಲಿ ಏನೋ ಚುಚ್ಚಿದಂತೆ ಅವಳಿಗೆ ಅನ್ನಿಸುತ್ತಿತ್ತು. ಸೂಜಿ 'ಓಡಾಡತೊಡಗಿತ್ತು'. ಅವಳು ಹತ್ತಿರದ ನಾಟಿ ವೈದ್ಯರ ಬಳಿಗೆ ಹೋದಳು. ಪಾಪ ಅವನೇನು ಮಾಡಿಯಾನು ? ಅವಳು ಲುಬ್ಲಿನ್ ಹಾಗೂ ವಾರ್ಸಾದ ಎಲ್ಲ ಡಾಕ್ಟರುಗಳನ್ನೂ ನೋಡಿದಳು. ಒಬ್ಬ ಡಾಕ್ಟರು ಒಂದು ರೀತಿ ಹೇಳಿದರೆ ಮತ್ತೊಬ್ಬರು ಇನ್ನೊಂದು ರೀತಿ ಹೇಳುತ್ತಿದ್ದರು. ಅವರು ಅವಳ ಹೊಟ್ಟೆಯನ್ನು ಪರೀಕ್ಷಿಸಿದರು. ಆದರೆ ಸೂಜಿ ಸಿಗಲಿಲ್ಲ. ದೇವರು ನಮ್ಮನ್ನು ರಕ್ಷಿಸಲಿ. ಇಟೆ ಹಾಸಿಗೆಯಲ್ಲಿ ಮಲಗಿ ಸೂಜಿ ತನಗೆ ಚುಚ್ಚುತ್ತಿದೆ ಎಂದು ನರಳಲಾರಂಭಿಸಿದಳು. ಇಡೀ ಪಟ್ಟಣವೇ ಒಂದು ರೀತಿ ಕ್ಷೋಭೆಗೊಳಗಾಯಿತು. ಆತ್ಮಹತ್ಯೆ ಮಾಡಿಕೊಳ್ಳಲೆಂದು ಅವಳು ತಾನೇ ಸೂಜಿ ನುಂಗಿದ್ದಾಳೆಂದು ಕೆಲವರು ದೇವರು ಅವಳನ್ನು ಶಿಕ್ಷಿಸುತ್ತಿದ್ದಾನೆ ಎಂದು ಮತ್ತೆ ಕೆಲವರು ಮಾತನಾಡಿಕೊಳ್ಳುತ್ತಿದ್ದರು. 'ಆದರೆ ದೇವರು ಅವಳನ್ನೇಕೆ ಶಿಕ್ಷಿಸಬೇಕು? ಅವಳು ಈಗಾಗಲೇ ತನ್ನ ಒರಟುತನಕ್ಕಾಗಿ ಸಾಕಷ್ಟು ನೋವನ್ನನುಭವಿಸಿದ್ದಳು' ಕಡೆಗೆ ಅವಳು ವಿಯನ್ನಾದ ಖ್ಯಾತ ಡಾಕ್ಟರ ಬಳಿಗೆ ಹೋದಳು. ಅವರಿಗೊಂದು ಉಪಾಯ ಹೊಳೆಯಿತು. ಅವರು ಅವಳಿಗೆ ನಿದ್ದೆ ಬರುವಂತೆ ಮಾಡಿ ಹೊಟ್ಟೆಯನ್ನು ಶಸ್ತ್ರಚಿಕಿತ್ಸೆ ಮಾಡಿದರು. ಅವಳು ಎಚ್ಚರವಾದಾಗ ಅವಳ ಹೊಟ್ಟೆಯಿಂದ ತೆಗೆದದ್ದೆಂದು

ಮೇಳಿ ಒಂದು ಸೂಜಿಯನ್ನು ಅವಳಿಗೆ ತೋರಿಸಿದರು. ನಾನು ಅಲ್ಲಿರಲಿಲ್ಲ. ನಿಜ ವಾಗಿಯೂ ಅವರು ಅವಳ ದೇಹದಿಂದಲೇ ಸೂಜಿ ತೆಗೆದಿರಬಹುದು, ಆದರೆ ಜನ ಹಾಗೆ ಹೇಳುವುದಿಲ್ಲ. ವಿಯನ್ನಾದಿಂದ ಬಂದ ನಂತರ ಅವಳು ಮೊದಲಿನಂತಾದಳು. ಈ ವೇಳೆಗೆ ಅಂಗಡಿ ದಿವಾಳಿಯಾಗಿತ್ತು. ತಂದೆ ಪರಲೋಕದಲ್ಲಿದ್ದ. ಇಟಿ ಹೊಸದಾಗಿ ಅಂಗಡಿಯೊಂದನ್ನು ತೆರೆದಳು. ಹೊಸ ಅಂಗಡಿಯಲ್ಲಿ ಅವಳು ಯಶಸ್ವಿಯಾದಳು. ಆದರೆ ಅವಳಿಗೆ ಮತ್ತೆ ಮಕ್ಕಳಾಗಲಿಲ್ಲ.

ನಾನು ಹೇಳುವುದನ್ನು ಮರೆತೆ–ಎಸ್ತರ್‌ರೋಸಾ ಹಾಗೂ ಈ ಇಬ್ಬರು ಹುಡುಗಿಯರ ನಡುವೆ ನಡೆದ ಈ ಘಟನೆಯ ನಂತರ ಜಮಾಸ್ಕೋದ ಮಾರಾಟದ ಹುಡುಗಿಯರು ಹೆಚ್ಚು ಮೃದು ಹೃದಯಿಗಳಾದರು. ಅಪರಿಚಿತ ರೊಡನೆ ಮಾತ್ರವಲ್ಲ. ತಮ್ಮ ಪಟ್ಟಣದವರೇ ಬಂದರೂ ನಯವಾಗಿ ವರ್ತಿಸುತ್ತಿದ್ದರು. ಗಿರಾಕಿಗಳು ಸರಕುಗಳನ್ನು ಕೊಳ್ಳಲೆಂದೇ ಬರುತ್ತಾರೋ ಅಥವಾ ಅವರನ್ನು ಪರೀಕ್ಷಿಸಲೆಂದೇ ಬರುತ್ತಾರೋ ಯಾರಿಗೆ ಗೊತ್ತು ? ದಾರಿಬದಿಯ ಪುಸ್ತಕ ವ್ಯಾಪಾರಿ ಸಹ ತನ್ನ ನಡುವಳಿಕೆಯಲ್ಲಿ ಸಭ್ಯತೆ ರೂಢಿಸಿಕೊಂಡ. ಕೇವಲ ಒಂದು ದಾರದ ಉಂಡೆ ಕೊಳ್ಳಲು ಬರುವ ಹೆಂಗಸಿಗೂ ಸಹ ಮಾರಾಟದ ಹುಡುಗಿಯರು ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳುತ್ತಿದ್ದರು.

ನಂತರದ ಘಟನೆಗಳು ನನಗೆ ತಿಳಿಯದು. ಆ ಬಳಿಕ ನಾನು ಜಮಾಸ್ಕೋದಿಂದ ಬಹುದೂರ ಹೋದೆ. ದೊಡ್ಡ ಪಟ್ಟಣಗಳಲ್ಲಿ ಜನ ಎಲ್ಲವನ್ನೂ. ಎಲ್ಲರನ್ನೂ ಮರೆಯುತ್ತಾರೆ, ದೇವರನ್ನೂ ಸಹ. ಬಹಳ ದಿನಗಳ ಹಿಂದೆಯೇ ಎಸ್ತರ್ ರೋಸಾ ಮತ್ತು ರೆಬ್‌ಲಿಮೆಲ್ ತೀರಿಕೊಂಡರೆಂದು ಕೇಳಿದೆ. ಬೆನ್‌ಜಿ ಹಾಗೂ ಆತನ ಹೆಂಡತಿಯ ಬಗ್ಗೆ ಇತ್ತೀಚೆಗೆ ಸುದ್ದಿಯಿಲ್ಲ. ಸಾಕಿದ ಹುಂಜ ಹಾಗೂ ಕೋಳಿ ಮರಿಗಳಿಂದಾಗಿ ಇಡೀ ಪಟ್ಟಣ ನಾಶವಾದಂತೆ. ಒಂದು ಸೂಜಿಯಿಂದಾಗಿ ಮದುವೆ ತಪ್ಪಿ ಹೋಯಿತು. ಎಲ್ಲಕ್ಕೂ ಅದೃಷ್ಟವಿರಬೇಕೆಂಬುದು ಸತ್ಯವಾದ ಮಾತು. ನಾವು ಗಾಢವಾಗಿ ಪ್ರೀತಿಸಬಹುದು. ಆದರೆ ಆ ಸಂಬಂಧ ನಮ್ಮಿಷ್ಟದಂತೆಯೇ ಕೊನೆಗಾಣದಿರಬಹುದು. ಹುಡುಗ ಹುಡುಗಿ ಎಳೆಂಟು ವರ್ಷಗಳ ಕಾಲ ಅನ್ಯೋನ್ಯರಾಗಿದ್ದು ಅನುರಕ್ತರಾಗಿರಬಹುದು. ಆದರೆ ಮಧ್ಯೆ ಯಾರೋ ಪ್ರವೇಶಿಸಿ ಆ ಸಂಬಂಧವನ್ನು ಹಾಳು ಮಾಡಿಬಿಡಬಹುದು. ಒಬ್ಬ ಹುಡುಗ ಸೇಡಿಗಾಗಿ ತನ್ನ ಗೆಳತಿಯ ಆಪ್ತ ಸ್ನೇಹಿತೆಯೊಬ್ಬಳನ್ನು ಮದುವೆ

ಯಾದ. ಆಕೆಯೂ ಸೇಡಿಗಾಗಿ ಇಪ್ಪತ್ತು ವರ್ಷಗಳವರೆಗೆ ಆತನನ್ನು ಹಾಸಿಗೆಗೆ ಸೇರಿಸಲಿಲ್ಲ. ಈ ಕತೆಯನ್ನು ನಾನು ನಿಮಗೆ ಹೇಳಬಹುದು. ಆದರೆ ಈಗಾಗಲೇ ಬಹಳ ಹೊತ್ತಾಗಿದೆ. ನಾನು ನಿಮಗೆ ಎಲ್ಲ ಕತೆಗಳನ್ನು ಹೇಳಬೇಕೆಂದರೆ ಏಳು ಹಗಲು ಏಳು ರಾತ್ರಿಗಳೇ ಬೇಕಾಗುತ್ತದೆಂದು ನನಗೆ ಗೊತ್ತು.

# ಕಟುಕ

ಯಾನಿಮೇರ್ ಕಾಲಮೀರ್‌ನ ಪ್ರಧಾನ ಧರ್ಮಾಧಿಕಾರಿಯಾಗಿ ನೇಮಕಗೊಳ್ಳಬೇಕಿತ್ತು. ಆತನ ತಂದೆ ಹಾಗೂ ತಾತ ಆ ಸ್ಥಾನದಲ್ಲಿದ್ದರು. ಆದರೆ ಕಜ್ಮೀರ್ ಪ್ರದೇಶದ ಜನ ಇವನ ನೇಮಕವನ್ನು ಪ್ರಬಲವಾಗಿ ವಿರೋಧಿಸಿದರು. ಈ ಬಾರಿ ಟ್ರಿಸ್ಕ್ ಕಡೆಯವರು ನಗರದ ಪ್ರಧಾನ ಧರ್ಮಾಧಿಕಾರಿಯಾಗುವುದನ್ನು ಅವರು ತಪ್ಪಿಸಬೇಕೆಂದು ನಿರ್ಧರಿಸಿದ್ದರು. ಹೀಗಾಗಿ ಅವರೆಲ್ಲರೂ ಅನೇಕ ಆಮಿಷಗಳ ಮೂಲಕ ಜಿಲ್ಲಾಧಿಕಾರಿಯನ್ನು ಒಲಿಸಿಕೊಂಡು ರಾಜ್ಯಪಾಲರಿಗೆ ವಿಶೇಷ ಮನವಿ ಸಲ್ಲಿಸಿದ್ದರು. ದೀರ್ಘ ಹೋರಾಟದ ನಂತರ ಕಜ್ಮೀರಿನವರು ತಮ್ಮವನೊಬ್ಬನನ್ನು ಕಾಲಮಿರ್‌ನ ಪ್ರಧಾನ ಧರ್ಮಾಧಿಕಾರಿಯಾಗಿಸುವಲ್ಲಿ ಯಶಸ್ವಿಯಾದರು. ಇದರಿಂದಾಗಿ ಯಾನಿಮೇರ್‌ಗೆ ತೊಂದರೆಯಾಗಬಾರದೆಂದು ಆತನ ಜೀವನಾಧಾರಕ್ಕಾಗಿ ಆತನನ್ನು ನಗರದ ಮತಾಚಾರದ ಕಟುಕನನ್ನಾಗಿ ನೇಮಿಸಿದರು.

ಮೊದಲೇ ಗಳಿಗುಂದಿದಂತೆ ಕಾಣುತ್ತಿದ್ದ ಯಾನಿಮೇರ್ ಈ ವಿಷಯವನ್ನು ಕೇಳಿ ಮತ್ತಷ್ಟು ಮಂಕಾದನು. ಕಟುಕವೃತ್ತಿ ತನಗಲ್ಲವೆಂದು ಆತ ತನ್ನ ನೇಮಕವನ್ನು ವಿರೋಧಿಸಿದ. ಆತ ಮೃದುಹೃದಯಿಯಾಗಿದ್ದ. ಆತನಿಗೆ ರಕ್ತಪಾತದ ದೃಶ್ಯವನ್ನು ಸಹಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಆದರೆ ಆತನ ಜಾತಿಯ ಮುಖ್ಯಸ್ಥರು, ಟ್ರಿಸ್ಕ್ ದೇವಾಲಯದ ಕಮಿಟಿ ಸದಸ್ಯರು, ಆತನ ಮಾವ, ಹೆಂಡತಿ–ಎಲ್ಲರೂ ಸೇರಿ ಈ ಹುದ್ದೆಯನ್ನು ಒಪ್ಪಿಕೊಳ್ಳುವಂತೆ ಅವನನ್ನು ಒತ್ತಾಯಿಸಿದರು. ನೂತನ ಪ್ರಧಾನ ಧರ್ಮಾಧಿಕಾರಿಯಾದ ರೆಬ್ ಶೋಲಮ್ ಸಹ ಝಾನಿಮೇರ್ ಒಪ್ಪಿಕೊಳ್ಳುವಂತೆ ಬಲವಂತ ಮಾಡಿದ. ಯಾನಿಮೇರ್‌ಗೆ

ಸಲ್ಲಬೇಕಿದ್ದ ಹುದ್ದೆಯನ್ನು ತಾನು ಕಿತ್ತುಕೊಂಡು ಆತನ ಬದುಕಿನ ನೆಲೆ ತಪ್ಪಿಸಿರುವೆನೆಂಬ ಪಾಪಪ್ರಜ್ಞೆ ಆತನಿಗಿತ್ತು. ಹೀಗಾಗಿ ಯಾನಿಮೇರ್ ಈ ಹುದ್ದೆಯನ್ನಾದರೂ ಒಪ್ಪಿಕೊಂಡಲ್ಲಿ ಆತನಿಗೆ ಸಮಾಧಾನವಾಗುತ್ತಿತ್ತು. ತರುಣನೊಬ್ಬ ಜೀವನಾಧಾರಕ್ಕೆ ಅಗತ್ಯವಾದ ಕೆಲಸವಿಲ್ಲದೆ ಇರುವುದು ಆತನಿಗೆ ಇಷ್ಟವಿರಲಿಲ್ಲ. ಟ್ರಿಸ್ಕ್‌ನ ಧರ್ಮಾಧಿಕಾರಿ ಯಾಕೋವ್‌ಲೈಬೆಲ್ ಸಹ ಯಾನಿಮೇರ್‌ಗೆ ಪತ್ರವೊಂದನ್ನು ಬರೆದು 'ಅನುಕಂಪೆಯ ಮೂಲಾಧಾರನಾದ ದೇವರ ಅನುಕಂಪೆಗಿಂತ ಮನುಷ್ಯನ ಅನುಕಂಪೆ ಹೆಚ್ಚಿನದಲ್ಲ.' ಪ್ರಾಣಿಯೊಂದನ್ನು ಪರಿಶುದ್ಧವಾದ ಕತ್ತಿಯಿಂದ ಭಕ್ತಿಪೂರ್ವಕ ಕೊಂದಲ್ಲಿ, ದೇಹದಿಂದ ಅದರ ಆತ್ಮವನ್ನು ಬಿಡುಗಡೆ ಮಾಡಿದ ಪುಣ್ಯ ಬರುತ್ತದೆ. ಅದ್ದರಿಂದಲೇ ಎಷ್ಟೋ ಸಾರಿ ಸಂತರ ಆತ್ಮ ತಾನು ಮಾಡಿರಬಹುದಾದ ಅಪರಾಧದಿಂದ ಬಿಡುಗಡೆ ಹೊಂದಲು ಹಸುಗಳ, ಹಕ್ಕಿಗಳ, ಮೀನುಗಳ ದೇಹ ಪ್ರವೇಶಿಸುತ್ತದೆ–ಎಂದೆಲ್ಲ ವಿವರಿಸಿ ಕಟುಕನ ವೃತ್ತಿಯನ್ನು ಯಾನಿಮೇರ್ ಒಪ್ಪಿಕೊಳ್ಳುವಂತೆ ಒತ್ತಾಯಿಸಿದ್ದ.

ಧರ್ಮಾಧಿಕಾರಿಯ ಪತ್ರದ ನಂತರ ಯಾನಿಮೇರ್ ಅನಿವಾರ್ಯವೆಂಬಂತೆ ಕಟುಕನ ವೃತ್ತಿಗೆ ತನ್ನನ್ನು ತಾನು ಒಪ್ಪಿಸಿಕೊಂಡ. ಆತ ಕಟುಕನಾಗಬೇಕೆಂಬುದು ವಿಧಿನಿಯಮವಾಗಿದ್ದಿರಬೇಕು. ಈಗ ಆತ ಕಟುಕ ವೃತ್ತಿಗೆ ಸಂಬಂಧಿಸಿದ 'ಗ್ರೈನ್ ಆಫ್ ದಿ ಅಕ್ಸ್' 'ಸುಲ್ಹಾನ್ ಅರುಚ್' ಮೊದಲಾದ ಗ್ರಂಥಗಳನ್ನು ಅಭ್ಯಾಸ ಮಾಡತೊಡಗಿದ. 'ಗ್ರೈನ್ ಆಫ್ ದಿ ಅಕ್ಸ್' ಗ್ರಂಥದ ಮೊದಲ ಪುಟದ ಮೊದಲ ಪ್ಯಾರಾದಲ್ಲಿಯೇ ಕಟುಕ ವೃತ್ತಿಯನ್ನವಲಂಬಿಸುವವನು ಧರ್ಮಶ್ರದ್ಧೆಯುಳ್ಳವನಾಗಿರಬೇಕು ಎಂದಿತ್ತು. ಯಾನಿಮೇರ್ ಈಗ ಮೊದಲಿಗಿಂತ ಹೆಚ್ಚು ಧರ್ಮಶಾಸ್ತ್ರಗಳಿಗೆ ವಿಧೇಯನಾದ.

ಯಾನಿಮೇರ್ ಕುಳ್ಳಗೆ, ತೆಳ್ಳಗೆ, ಸದಾ ಕಳೆಗುಂದಿದ ಮುಖದವನಾಗಿದ್ದ. ಗಲ್ಲದ ತುದಿಯಲ್ಲೊಂದಿಷ್ಟು ಗಡ್ಡ, ಮೊಂಡ ಮೂಗು, ಒಳಹೋದ ಬಾಯಿ, ಸದಾ ಹೆದರಿದಂತಿರುವ ಹಳದಿ ಕಣ್ಣುಗಳು–ಆತನ ವ್ಯಕ್ತಿತ್ವವನ್ನು ಹೆಚ್ಚು ಕರುಣಾಜನಕವಾಗಿ ಮಾಡಿದ್ದುವಲ್ಲದೆ, ಅವು ಆತನ ಧರ್ಮಶ್ರದ್ಧೆಗೆ ಪೂರಕವೆಂಬಂತಿದ್ದುವು. ಮದುವೆಯಾದ ಮೇಲೆ ಮಾವನ ಮನೆಯಿಂದ ಬರುತ್ತಿದ್ದಂತೆಯೇ ಆತ ಉಪವಾಸ, ಜಾಗರಣೆಗಳನ್ನು ಕಟ್ಟುನಿಟ್ಟಾಗಿ ಆಚರಿಸಲು ಆರಂಭಿಸಿದ್ದ.






ಆತನ ಹೆಂಡತಿ, ರಿಟಿದೋಪ್, ಈತ ಈ ಪ್ರಪಂಚದವನಲ್ಲವೆಂದು ಆಗಲೇ ಗೋಳಾಡಿದ್ದಳು. ಮುಟ್ಟಿದ ದಿನಗಳಲ್ಲಿ ಮಾತ್ರವಲ್ಲ, ಉಳಿದ ದಿನಗಳಲ್ಲಿಯೂ ಆತ ತನ್ನೊಡನೆ ಒಂದೂ ಮಾತನಾಡುವುದಿಲ್ಲ, ತನ್ನನ್ನು ಗಮನಿಸುವುದೇ ಇಲ್ಲವೆಂದು ಆಕೆ ತಾಯಿಯೊಡನೆ ದೂರುತ್ತಿದ್ದಳು. ಯಾನಿಮೇರ್ ತಿಂಗಳಿಗೊಮ್ಮೆ ಪವಿತ್ರ ಸ್ನಾನದ ನಂತರ ಮಾತ್ರ ಅವಳೊಡನೆ ಇರುತ್ತಿದ್ದ. ತನ್ನ ಮಕ್ಕಳ ಹೆಸರುಗಳೂ ಆತನಿಗೆ ನೆನಪಿಲ್ಲವೆಂದು ಅವಳು ಹೇಳುತ್ತಿದ್ದಳು.

ಕಟುಕ ವೃತ್ತಿಯನ್ನವಲಂಬಿಸಿದ ನಂತರ ಯಾನಿಮೇರ್ ತನ್ನ ಮೇಲೆ ಇನ್ನೂ ಹೆಚ್ಚಿನ ನಿಯಮಗಳನ್ನು ವಿಧಿಸಿಕೊಂಡ. ಕಡಿಮೆ, ತೀರಾ ಕಡಿಮೆ ತಿನ್ನುತ್ತಿದ್ದ. ಮಾತನಾಡುವುದನ್ನು ಬಹುಪಾಲು ಕಡಿಮೆ ಮಾಡಿದ್ದ. ಭಿಕ್ಷುಕರು ಯಾರಾದರೂ ಬಂದರೆ ಓಡಿ ಹೋಗಿ ಮನೆಯೊಳಗೆ ಕರೆತಂದು, ಉಪಚರಿಸಿ ಹಣಕೊಟ್ಟು ಕಳಿಸುತ್ತಿದ್ದ. ಯಾನಿಮೇರ್ ಈ ವೃತ್ತಿಯನ್ನು ಒಪ್ಪಿಕೊಂಡ ನಂತರ ವಾಸ್ತವವಾಗಿ ಹೆಚ್ಚು ದುಃಖಿಯಾಗಿದ್ದ. ಆದರೆ ಧರ್ಮಾಧಿಕಾರಿಯನ್ನು ವಿರೋಧಿಸುವ ಧೈರ್ಯ ಅವನಿಗಿರಲಿಲ್ಲ. ಪ್ರಾಣಿಗಳನ್ನು ಹಿಂಸಿಸುವುದು, ಪರಿಣಾಮವಾಗಿ ಅಸಾಧ್ಯ ಮಾನಸಿಕ ಯಾತನೆಯನ್ನನುಭವಿಸುವುದು ತನ್ನ ಹಣೆಬರಹವಿರಬೇಕೆಂದು ಆತ ಅನೇಕ ಸಾರಿ ಅಂದುಕೊಳ್ಳುತ್ತಿದ್ದ. ಅವನು ಅದೆಂಥ ನೋವನ್ನನುಭವಿಸುತ್ತಿದ್ದನೆಂಬುದು ದೇವರೊಬ್ಬನಿಗೆ ಮಾತ್ರ ಗೊತ್ತು.

ಮೊದಲ ಕೋಳಿಯನ್ನು ಕುಯ್ಯುವಾಗ ತಾನು ಮೂರ್ಛೆ ಹೋಗಬಹುದು, ಅಥವಾ ಕೈನಡುಗಿ ಕುಯ್ಯಲು ಸಾಧ್ಯವಾಗದೇ ಹೋಗಬಹುದು ಎಂದು ಯಾನಿಮೇರ್ ಭಾವಿಸಿದ್ದ. ಅದೇ ಕ್ಷಣದಲ್ಲಿ, ಆತನ ಮನಸ್ಸಿನ ಆಳದಲ್ಲೆಲ್ಲೋ ತಾನು ಕೋಳಿಯನ್ನು ಕುಯ್ಯುವಾಗ ತಪ್ಪು ಮಾಡಬಹುದು ಎಂದೂ ಅನ್ನಿಸುತ್ತಿತ್ತು. ಹಾಗಾದಲ್ಲಿ ಆತ ಕಟುಕವೃತ್ತಿಯಿಂದ ನಿವೃತ್ತನಾಗಬಹುದಿತ್ತು. ಆದರೆ ಅದು ಹೇಗೋ ಎಲ್ಲವೂ ನಿಯಮಬದ್ಧವಾಗಿಯೇ ನಡೆಯಿತು.

ದಿನಕ್ಕೆ ಹತ್ತಾರು ಬಾರಿ ಯಾನಿಮೇರ್ ಧರ್ಮಾಧಿಕಾರಿ ಹೇಳಿದ ಮಾತುಗಳನ್ನೇ ನೆನಪಿಸಿಕೊಳ್ಳುತ್ತಿದ್ದ: 'ಅನುಕಂಪೆಯ ಮೂಲಾಧಾರನಾದ ದೇವರ ಅನುಕಂಪೆಗಿಂತ ಮನುಷ್ಯನ ಅನುಕಂಪೆ ಹೆಚ್ಚಿನದಲ್ಲ.' 'ನಾನು ಆಜ್ಞೆ ಮಾಡಿದಂತೆ ನೀನು ಪ್ರಾಣಿಗಳನ್ನಾಗಲೀ, ಪಕ್ಷಿಗಳನ್ನಾಗಲೀ, ಕೊಲ್ಲಬೇಕಾಗುತ್ತದೆ' ಎಂದು ತೋರಾ ಧರ್ಮಗ್ರಂಥದಲ್ಲಿದೆ. ಮೋಸೆಸ್ ಸಿನಾಯ್ ಪರ್ವತದ

ಮೇಲೆ ನಿಂತು ಕಟುಕ ವೃತ್ತಿಯ ರೀತಿನೀತಿಗಳನ್ನೂ, ಪ್ರಾಣಿಗಳ ದೇಹದಲ್ಲಿರುವ ಅಶುಚಿಯನ್ನು ತೆಗೆಯುವ ವಿಧಾನವನ್ನೂ ತಿಳಿಸಿದ್ದಾನೆ. ಜೀವ, ಸಾವು, ಮನುಷ್ಯ, ಪ್ರಾಣಿ, ಪಕ್ಷಿ–ಇವೆಲ್ಲ ನಿಗೂಢಗಳೊಳಗಿನ ನಿಗೂಢಗಳು. ಕಟುಕ ಕೊಲ್ಲದ ಪ್ರಾಣಿಗಳೇನು ಸಾಯುವುದಿಲ್ಲವೇ ? ಅನೇಕ ರೀತಿಯ ರೋಗಗಳಿಂದ ಹಲವಾರು ತಿಂಗಳು ನರಳಿ ನರಳಿ ಸಾಯಬಹುದು. ಕಾಡಿನಲ್ಲಿ ಒಂದು ಪ್ರಾಣಿ ಮತ್ತೊಂದು ಪ್ರಾಣಿಯನ್ನು ಕೊಂದು ತಿನ್ನುವುದಿಲ್ಲವೆ ? ಸಮುದ್ರದಲ್ಲಿ ಒಂದು ಮೀನು ಮತ್ತೊಂದನ್ನು ತಿನ್ನುತ್ತದೆ. ಕಾಲೆಮಿರ್‌ನ ಗುಡಿಸಲುಗಳಲ್ಲಿ ಅನೇಕ ಅಂಗವಿಕಲರು, ಪಾರ್ಶ್ವವಾಯುಪೀಡಿತರು ಕುಳಿತಲ್ಲೇ ಎಲ್ಲ ರೀತಿಯ ಹೊಲಸು ಮಾಡಿಕೊಳ್ಳುತ್ತಾ ನರಳುತ್ತಿಲ್ಲವೇ ? ಯಾವ ಮನುಷ್ಯನೂ ದುಃಖದಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ.

ಇಷ್ಟೆಲ್ಲ ಯೋಚಿಸಿದರೂ ಯಾನಿಮೇರ್‌ನ ಮನಸ್ಸು ಸಮಾಧಾನ ಹೊಂದಲಿಲ್ಲ. ಬಲಿಯಾದ ಪ್ರತಿಯೊಂದು ಪ್ರಾಣಿಯ ಆಕ್ರಂದನವೂ ಆತನ ಕರುಳಿನಲ್ಲಿ ಪ್ರತಿಧ್ವನಿಗೊಳ್ಳುತ್ತಿತ್ತು. ಅದು ಚಿಕ್ಕ ಪ್ರಾಣಿಯಾಗಿರಲಿ, ದೊಡ್ಡ ಪ್ರಾಣಿಯಾಗಿರಲಿ ಪ್ರತಿಯೊಂದು ಪ್ರಾಣಿಯನ್ನು ಕತ್ತರಿಸುವಾಗಲೂ, ಯಾನಿಮೇರ್ ಅದೆಂಥ ನೋವನ್ನು ಅನುಭವಿಸುತ್ತಿದ್ದನೆಂದರೆ ತನ್ನ ಕತ್ತನ್ನೇ ತಾನು ಕತ್ತರಿಸಿಕೊಂಡ ಅನುಭವವಾಗುತ್ತಿತ್ತು. ಆತ ಪಡೆದ ಎಲ್ಲ ರೀತಿಯ ಅನುಭವಗಳಿಗಿಂತಲೂ ಕಟುಕ ವೃತ್ತಿಯ ಈ ಅನುಭವ ಘೋರವಾದುದಾಗಿತ್ತು.

ಯಾನಿಮೇರ್ ಈ ವೃತ್ತಿಗಿಳಿದು ಕೇವಲ ಮೂರು ತಿಂಗಳುಗಳಾಗಿದ್ದುವು. ಆದರೆ ಆತನಿಗೆ ಅನೇಕ ವರ್ಷಗಳಾದಂತೆ ಅನ್ನಿಸುತ್ತಿತ್ತು. ತಾನು ಸಂಪೂರ್ಣ ವಾಗಿ ರಕ್ತದಲ್ಲಿಯೇ ಮುಳುಗಿ ಹೋಗಿರುವಂತೆ ಆತನಿಗೆ ಭಾಸವಾಗುತ್ತಿತ್ತು. ಕೋಳಿ, ಕೊಕ್ಕರೆ, ರೋಸ್ಟರ್ ಹಕ್ಕಿಗಳ ಆಕ್ರಂದನ, ರೆಕ್ಕೆಬಡಿತ, ಕೂಡಿಹಾಕಿದ್ದ ರೂಮಿನ ಬಾಗಿಲು ಕೆರೆಯುವ ಶಬ್ದ–ಮೊದಲಾದುವುಗಳು ಅವನ ಕಿವಿಯಲ್ಲಿ ಸದಾ ಗುಂಯ್‌ಗುಡುತ್ತಿದ್ದುವು. ಪ್ರತಿಯೊಂದು ಜೀವವೂ ತನ್ನದೇ ಆದ ರೀತಿಯಲ್ಲಿ ಬಲಿಯನ್ನು ವಿರೋಧಿಸುತ್ತಿತ್ತು, ತಪ್ಪಿಸಿಕೊಳ್ಳಲು ಪ್ರಯತ್ನಿಸು ತ್ತಿತ್ತು. ಕೊನೆಯುಸಿರಿನ ತನಕ ಸೃಷ್ಟಿಕರ್ತನೊಡನೆ ಈ ಬಗ್ಗೆ ವಾದಿಸಲು ಅದು ಹವಣಿಸುತ್ತಿದ್ದಂತೆ ತೋರುತ್ತಿತ್ತು.

ಯಾನಿಮೇರ್‌ನ ಮನಸ್ಸಿನಲ್ಲಿ ಅನೇಕ ರೀತಿಯ ಪ್ರಶ್ನೆಗಳು ಉದ್ಭವಿಸುತ್ತಿ

ದ್ದುವು. ಭಗವಂತ ಈ ಜಗತ್ತನ್ನು ಸೃಷ್ಟಿಸುವಾಗ ತಾನೇ ಅಪಾರ ನೋವನ್ನ ನುಭವಿಸಿರಬೇಕು. ಆದ್ದರಿಂದಲೇ ಜಗತ್ತಿನಲ್ಲಿ ನೋವು ಅನಿವಾರ್ಯವಾಗಿದೆ. ಆದರೆ ಪ್ರಾಣಿಗಳಿಗೆ ತಮ್ಮದೇ ಆದ ಆಯ್ಕೆಯಿಲ್ಲದಿರುವಾಗ ಅವುಗಳೇಕೆ ನೋವನ್ನನು ಭವಿಸಬೇಕು ? ಕಟುಕರು ತಮ್ಮ ಹರಿತವಾದ ಕತ್ತಿಯಿಂದ ಎತ್ತುಗಳನ್ನು ಕತ್ತರಿಸುವುದನ್ನು, ಅವುಗಳ ಶರೀರದಿಂದ ಚರ್ಮ ಬೇರ್ಪಡಿಸುವುದನ್ನು ಯಾನಿಮೇರ್ ಅಸಹಾಯಕತೆಯಿಂದ ನಿಂತು ನೋಡುತ್ತಿದ್ದ. ಜೀವಂತ ಹಕ್ಕಿಗಳ ರೆಕ್ಕೆಗಳನ್ನು ಹೆಂಗಸರು ನಿರ್ದಯೆಯಿಂದ ಕೀಳುವುದನ್ನು ಅವನು ನೋವು ತುಂಬಿದ ಕಣ್ಣುಗಳಿಂದ ವೀಕ್ಷಿಸುತ್ತಿದ್ದ.

ಪ್ರತಿ ಹಸುವಿನ ತೊಳ್ಳೆ ಹಾಗೂ ಕರುಳಿನ ಭಾಗವನ್ನು ಮತಾಚರಣೆಯ ಕಟುಕನೇ ಪಡೆಯುವುದು ಸಂಪ್ರದಾಯ. ಹೀಗಾಗಿ ಯಾನಿಮೇರ್‌ನ ಮನೆ ಮಾಂಸದಿಂದ ತುಂಬಿ ಹೋಯಿತು. ರಿಟೆದೋಷ್ ಕೊಪ್ಪರಿಗೆಯಂತಹ ಕಡಾಯಿ ಗಳಲ್ಲಿ ಸೂಪ್ ತಯಾರಿಸುತ್ತಿದ್ದಳು. ದೊಡ್ಡ ಅಡಿಗೆಮನೆಯಲ್ಲಿ ಸದಾ ಒಲೆ ಉರಿಯುತ್ತಿತ್ತು. ಬೇಯಿಸುವುದು, ಸುಡುವುದು, ಹುರಿಯುವುದು, ಇತ್ಯಾದಿ ಒಂದಲ್ಲ ಒಂದು ಕೆಲಸ ನಡೆಯುತ್ತಲೇ ಇತ್ತು. ರಿಟೆದೋಷ್ ಮತ್ತೆ ಗರ್ಭಿಣಿ ಯಾದಳು. ಅವಳ ದೇಹ ಮತ್ತಷ್ಟು ಉಬ್ಬಿತು. ಅವಳಿಗೆ ಐವರು ತಂಗಿಯು ರಿದ್ದರು. ಎಲ್ಲರೂ ಇವಳಂತೆಯೇ ತುಂಬಾ ದಪ್ಪಗಿದ್ದರು. ಅವಳ ತಂಗಿಯು ರೆಲ್ಲರೂ ಮಕ್ಕಳೊಡಗೂಡಿ ಬಂದಿದ್ದರು. ಯಾನಿಮೇರ್‌ನ ಅತ್ತೆ–ರಿಟೆದೋಷ್‌ಳ ತಾಯಿ–ಪ್ರತಿನಿತ್ಯ ಹೊಸ ಹೊಸ ರೀತಿಯ ಬಗೆಬಗೆಯ ಅಡಿಗೆ ಮಾಡುತ್ತಿದ್ದಳು. ಸಾಮಾನ್ಯವಾಗಿ ಹೆಂಗಸರು ಮೆಲ್ಲಗೆ ಮಾತಾಡಬೇಕು, ಕೇಳಿಸಿಯೂ ಕೇಳಿಸದಂತಿರ ಬೇಕು. ಆದರೆ ರಿಟೆದೋಷ್ ನೇಮಿಸಿಕೊಂಡಿದ್ದ ಹೆಣ್ಣಾಳು–ನೀರು ಹೊರು ವವನ ಮಗಳವಳು–ಜೋರಾಗಿ ನಗುತ್ತಿದ್ದಳು, ಹಾಡುತ್ತಿದ್ದಳು, ಕಿರುಚಿ ಮಾತ ನಾಡುತ್ತಿದ್ದಳು, ನೆಲ ನಡುಗುವಂತೆ ನಡೆಯುತ್ತಿದ್ದಳು. ಅವಳು ಮಾಡುತ್ತಿದ್ದ ಶಬ್ದ ಕೊಠಡಿಗಳಲ್ಲೆಲ್ಲಾ ಪ್ರತಿಧ್ವನಿಗೊಳ್ಳುತ್ತಿತ್ತು.

ಯಾನಿಮೇರ್ ಈ ಇಹಜಗತ್ತಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಷ್ಟೂ ಅದು ಆತನನ್ನು ತನ್ನತ್ತ ತೀವ್ರವಾಗಿ ಸೆಳೆಯುತ್ತಿತ್ತು. ಕಸಾಯಿಖಾನೆಯ ವಾಸನೆ ಅವನ ಮೂಗು ತುಂಬಿತ್ತು. ಅವನು ತೋರಾ ಧರ್ಮಗ್ರಂಥದ ಅಧ್ಯಯ ನದಲ್ಲಿ ಇದನ್ನೆಲ್ಲ ಮರೆಯಲು ಯತ್ನಿಸಿದ. ಆದರೆ ತೋರಾ ಗ್ರಂಥ ಪೂರ್ತಿ

ಲೌಕಿಕ ವಿಷಯಗಳಿಂದಲೇ ತುಂಬಿತ್ತು. ನಲವತ್ತನೇ ವರ್ಷದ ನಂತರ ಕಬಾಲ ಗ್ರಂಥ ಓದುವುದು ಉಚಿತವೆಂದು ತಿಳಿದಿದ್ದರೂ ಈಗಲೇ ಅದನ್ನೋದಲು ಆರಂಭಿಸಿದ. ಅಲ್ಲದೆ 'ದಿ ಆರ್ಚರ್ಡ್', ದಿ ಬುಕ್ ಆಫ್ ಕ್ರಿಯೇಷನ್' 'ಟ್ರೀ ಆಫ್ ಲೈಫ್' (ಜೀವನ ವೃಕ್ಷ)–ಮೊದಲಾದ ಗ್ರಂಥಗಳ ಹಾಳೆಗಳನ್ನೆಲ್ಲಾ ತಿರುವಿ ಹಾಕಿದ. ಸ್ವರ್ಗದಲ್ಲಿ ಸಾವಿಲ್ಲ, ನೋವಿಲ್ಲ, ಹಿಂಸೆಯಿಲ್ಲ, ಹೊಟ್ಟೆ ಕರುಳುಗಳಿಲ್ಲ, ಹೃದಯ ಜಠರ ಶ್ವಾಸಕೋಶಗಳಿಲ್ಲ, ಅಶುಚಿಯಿಲ್ಲವೆಂಬ ಅಂಶ ಆವನ ಮನಸ್ಸನ್ನು ತಾಕಿತು.

ಒಂದು ರಾತ್ರಿ ಯಾನಿವೇರ್ ಕಿಟಕಿಯ ಬಳಿ ಹೋಗಿ ನಿಂತು ಆಕಾಶವನ್ನು ನೋಡುತ್ತಿದ್ದ. ಚಂದ್ರನ ಸುತ್ತ ಅಪೂರ್ವ ಕಾಂತಿಯಿತ್ತು. ನಕ್ಷತ್ರಗಳು ಅಲೌಕಿಕ ಸತ್ಯಗಳನ್ನು, ನಿಗೂಢಗಳನ್ನೂ ಹೇಳುವಂತೆ ಹೊಳೆಯುತ್ತಿದ್ದುವು. ದೂರದಲ್ಲಿ, ಬಲುದೂರದಲ್ಲಿ ನಕ್ಷತ್ರಪುಂಜಗಳಾಚೆ ದೇವತೆಗಳು, ಸ್ವರ್ಗದ ಮೃಗಗಳು, ರಥಗಳೂ ಓಡಿಯಾಡುತ್ತಿರುವಂತೆ ಆತನಿಗೆ ಭಾಸವಾಯಿತು. ಸ್ವರ್ಗದಲ್ಲಿ ತೋರಾ ಗ್ರಂಥದಲ್ಲಿನ ನಿಗೂಢಗಳನ್ನು ಆತ್ಮಗಳಿಗೆ ವಿವರಿಸುತ್ತಾರಂತೆ. ಪ್ರತಿಯೊಂದು ಪವಿತ್ರ ಜೀವಾತ್ಮವೂ ಮುನ್ನೂರ ಅರವತ್ತು ಜನ್ಮಗಳನ್ನು ಪಡೆದು, ನಂತರ ದೇವಸನ್ನಿಧಿ ಪಡೆಯುತ್ತದೆ. ದೇವಸನ್ನಿಧಿಯ ಹತ್ತಿರ ಹೋದಂತೆ ಜ್ಞಾನ ಜ್ಯೋತಿ ಹೆಚ್ಚು ಪ್ರಜ್ವಲಿಸುತ್ತದೆ. ಸಜ್ಜನಿಕೆಯ ವ್ಯಾಸ ವಿಸ್ತಾರವಾಗುತ್ತದೆ. ಕೆಟ್ಟತನದ ವೃತ್ತ ಕಿರಿದಾಗುತ್ತಾ ಹೋಗುತ್ತದೆ–ಮೊದಲಾದ ಸಂಗತಿಗಳು ಅವನ ಮನಸ್ಸಿಗೆ ಬಂದವು.

ಮನುಷ್ಯ ಸಾವನ್ನು ಬಯಸದಿರಬಹುದು, ಆದರೆ ಈ ಜೀವದ ಅಂತ್ಯಕ್ಕಾಗಿ ಆಶಿಸುತ್ತಿರುತ್ತಾನೆ. ಯಾನಿವೇರ್ ಈ ದೇಹಕ್ಕೆ ಸಂಬಂಧಿಸಿದ ಎಲ್ಲದರ ಬಗ್ಗೆ ಒಂದು ರೀತಿಯ ತಿರಸ್ಕಾರ ಬೆಳೆಸಿಕೊಂಡ. ಆತನಿಗೆ ಇತರರ ಜೊತೆ ಪವಿತ್ರ ಸ್ನಾನಕ್ಕೆ ಹೋಗುವುದೂ ಸಹ ಕಷ್ಟವಾಗುತ್ತಿತ್ತು. ಪ್ರತಿಯೊಂದು ಚರ್ಮದ ಹಿಂದೆಯೂ ಆತನಿಗೆ ರಕ್ತ ಕಾಣಿಸುತ್ತಿತ್ತು. ಪ್ರತಿ ಕತ್ತೂ ಸಹ ಕತ್ತಿಯ ನೆನಪು ತರುತ್ತಿತ್ತು. ಪ್ರತಿಯೊಬ್ಬ ಮನುಷ್ಯನಿಗೂ ಪ್ರಾಣಿಗಳಂತೆಯೇ ಎಲುಬುಗಳು, ರಕ್ತನಾಳಗಳು, ಕರುಳುಗಳು, ಪಿತ್ತಗಳೂ ಇರುತ್ತವೆ. ಕತ್ತಿಯ ಒಂದು ಹೊಡೆತ ಒಂದೊಂದು ಮನೆಯ ಆಧಾರಸ್ತಂಭಗಳಂತಿರುವ ಅವರನ್ನೆಲ್ಲ ಬಾಳೆಯ ದಿಂಡಿನಂತೆ ನೆಲಕ್ಕುರುಳಿಸಬಲ್ಲುದು. ತಾಲ್ಮುದ್ ಹೇಳುವಂತೆ ಯಾವತ್ತಿದ್ದರೂ

ಬೂದಿಯಾಗಬೇಕಾದ ಈ ದೇಹ ಈಗಾಗಲೇ ಬೂದಿಯಾದಂತೆ ಆತನಿಗೆ ಅನ್ನಿಸು ತ್ತಿತ್ತು. ಮನುಷ್ಯನ ದೇಹ ರೋಗದಿಂದ ನರಳಿ ಪಾಸನೆ ಬಂದು ಅಂತ್ಯಗೊಂಡರೆ ಅದಕ್ಕೂ ಕೊಳೆತ ಮಾಂಸದ ತುಂಡಿಗೂ ಏನು ವ್ಯತ್ಯಾಸ ?

ಪುರಾತನ ಋಷಿಗಳು ಈ ದೇಹವನ್ನು ಗುಹೆಗೆ, ಸೆರೆಮನೆಗೆ ಹೋಲಿಸಿ, ಅದರಲ್ಲಿ ಆತ್ಮ ಬಂಧಿತವಾಗಿರುತ್ತದೆ, ಬಿಡುಗಡೆ ಬಯಸಿ ತಪತಪಿಸುತ್ತಿರುತ್ತದೆ ಎಂದು ಏಕೆ ಹೇಳುತ್ತಿದ್ದರೆಂದು ಯಾಸಿಮೇರ್‌ಗೆ ಈಗ ಅರ್ಥವಾಗುತ್ತಿತ್ತು. ತಾಲಮುದ್‌ನ 'ಸಾವು ನಿಜಕ್ಕೂ ಒಳ್ಳೆಯದು' ಎಂಬ ಮಾತುಗಳ ಹಿನ್ನೆಲೆ ಈಗ ಅವನ ಅರಿವಿಗೆ ಬಂತು. ಆದರೂ ಮನುಷ್ಯ ಸಾಯಲು, ಈ ಸೆರೆಮನೆಯಿಂದ ಆತ್ಮವನ್ನು ಬಿಡುಗಡೆ ಮಾಡಲು ಸ್ವತಂತ್ರನಲ್ಲ ಎಂಬ ಸತ್ಯವನ್ನೂ ಆತ ತಿಳಿದ. ಈ ಸೆರೆಮನೆಯ ಅಧಿಕಾರಿ ಬಂದು ಸರಪಳಿಯನ್ನು ಬಿಚ್ಚುವವರೆಗೆ, ಬಾಗಿಲು ಗಳನ್ನು ತೆಗೆಯುವವರೆಗೆ ಕಾಯಬೇಕು.

ಯಾಸಿಮೇರ್ ತನ್ನ ಹಾಸಿಗೆಗೆ ಹಿಂತಿರುಗಿದ. ಇದುವರೆಗೂ ಆತ ಪಕ್ಷಿಗಳ ತುಪ್ಪಳದಿಂದ ಮಾಡಿದ ಮೃದುವಾದ ಹಾಸಿಗೆ ಹೊದಿಕೆಗಳನ್ನು ಬಳಸು ತ್ತಿದ್ದ. ಈಗ ಇದ್ದಕ್ಕಿದ್ದಂತೆ ಆತನಿಗೆ ಈ ತುಪ್ಪಳ ಪಕ್ಷಿಗಳಿಂದ ಕಿತ್ತುತಂದದ್ದೆಂಬ ಅರಿವು ಮೂಡಿ ಮನಸ್ಸು ಮುದುಡಿತು. ಯಾಸಿಮೇರ್‌ನ ಪಕ್ಕದಲ್ಲಿ ಮತ್ತೊಂದು ಹಾಸಿಗೆಯಲ್ಲಿ ರಿಟೆದೋಷ್ ಮಲಗಿ ಗೊರಕೆ ಹೊಡೆಯುತ್ತಿದ್ದಳು. ಆಗಾಗ್ಗೆ ಅವಳ ಮೂಗಿನಿಂದ ಶಿಳ್ಳೆ ಹಾಕಿದಂತಹ ಧ್ವನಿ ಬರುತ್ತಿತ್ತು. ತುಟಿಗಳ ಮೇಲೆ ಎಂಜಲಿನ ಗುಳ್ಳೆ ಮೂಡುತ್ತಿತ್ತು. ಯಾಸಿಮೇರ್‌ನ ಮಕ್ಕಳು ಆಗಾಗ್ಗೆ ಬರಿ ಕಾಲಿನಲ್ಲಿ ಟಪಟಪ ಸದ್ದು ಮಾಡುತ್ತ ಬಚ್ಚಲುಮನೆಗೆ ಹೋಗಿ ಬರುತ್ತಿದ್ದರು. ಮಕ್ಕಳಿಬ್ಬರೂ ಒಟ್ಟಿಗೇ ಮಲಗುತ್ತಿದ್ದರು. ಕೆಲವೊಮ್ಮೆ ಅವರು ಅರ್ಧರಾತ್ರಿಯ ವರೆಗೆ ನಗುತ್ತಾ, ಪಿಸುಗುಡುತ್ತಾ, ಮಾತನಾಡುತ್ತಿದ್ದುದುಂಟು.

ಯಾಸಿಮೇರ್‌ನ ಮನಸ್ಸಿನಲ್ಲಿ ತನಗೊಂದು ಗಂಡುಮಗುವಾಗಬೇಕೆಂದೂ, ಆ ಮಗು ಬೆಳೆದು ಮುಂದೆ ತೋರಾ ಧರ್ಮಗ್ರಂಥ ಅಭ್ಯಾಸಮಾಡಬೇಕೆಂದೂ ಬಹಳ ಆಸೆಯಿತ್ತು. ಆದರೆ ರಿಟೆದೋಷ್ ಎರಡೂ ಬಾರಿ ಹೆಣ್ಣುಮಗುವನ್ನೇ ಹಡೆದಳು. ಅವರು ಚಿಕ್ಕವರಿದ್ದಾಗ ಯಾಸಿಮೇರ್ ಆಗೀಗ ಪ್ರೀತಿಯಿಂದ ಅವರನ್ನು ಮುದ್ದುಮಾಡಿದ್ದುಂಟು. ಪರಿಕರ್ತನೋತ್ಸವಕ್ಕೆ ಹೋಗಿಬಂದಾಗ ಲ್ಲೆಲ್ಲ ತಪ್ಪದೆ ಅವರಿಗೆ ಕೇಕ್ ತಂದುಕೊಡುತ್ತಿದ್ದನು. ಕೆಲವು ಬಾರಿ ಚಿಕ್ಕವಳನ್ನು

ತೊಡೆಮೇಲೆ ಕೂರಿಸಿಕೊಂಡು ಆಟವಾಡಿಸಿದ್ದೂ ಉಂಟು. ಈಗ ಅವರು ದೊಡ್ಡ ವರಾಗಿದ್ದಾರೆ. ಗಾತ್ರದಲ್ಲಿ ತಾಯಿಯನ್ನೂ ಮೀರಿಸಿದ್ದಾರೆ. ಅವರು ಜಾಸ್ತಿ ತಿನ್ನುತ್ತಾರೆ, ಆದರಿಂದಾಗಿ ಹೆಚ್ಚು ದಪ್ಪಗಾಗುತ್ತಿದ್ದಾರೆ ಎಂದು ಅವರ ತಾಯಿ ರಿಟೆದೋಪ್ ದೂರುತ್ತಿದ್ದಳು. ಅವರು ಡಬ್ಬಿಗಳಿಂದ ಕುರುಕು ತಿಂಡಿಗಳನ್ನು ಕದ್ದು ತಿನ್ನುತ್ತಿದ್ದರು. ದೊಡ್ಡವಳಾದ ಬಾಷ್‌ಳ ಬಗ್ಗೆ ಆಗಲೇ ಮದುವೆಯ ಮಾತುಕತೆಗಳೂ ನಡೆಯುತ್ತಿದ್ದುವು. ಮಕ್ಕಳಿಬ್ಬರೂ ಒಂದುಕ್ಷಣ ಜಗಳ ವಾಡುತ್ತಿದ್ದರು, ಆದರೆ ಮರುಕ್ಷಣ ಒಬ್ಬರಿಗೊಬ್ಬರು ತಲೆ ಬಾಚಿ ಜಡೆಹೆಣೆದು ಖುಷಿಯಾಗಿರುತ್ತಿದ್ದರು. ಅವರು ಯಾವಾಗಲೂ ಬಟ್ಟೆಗಳು, ಶೂಗಳು, ಇತರ ಉಡುಪುಗಳನ್ನು ಕುರಿತೇ ಮಾತನಾಡುತ್ತಿದ್ದರು. ಹೇನುಗಳನ್ನು ಹಿಡಿಯು ತ್ತಿದ್ದರು, ಜಗಳವಾಡಿ ಹೊಡೆದಾಡುತ್ತಿದ್ದರು. ಮುದ್ದಾಡಿ ನಕ್ಕು ನಲಿಯು ತ್ತಿದ್ದರು–ಹೀಗೆ ಅವರದೇ ಒಂದು ವಿಶಿಷ್ಟ ಪ್ರಪಂಚ. ಯಾನಿಮೇರ್ ಕೆಲವೊಮ್ಮೆ ಮಕ್ಕಳನ್ನು ಗದರಿಸಿದಾಗ ರಿಟೆದೋಪ್ ಅಡ್ಡಬಂದು – 'ಅವರನ್ನು ಬಯ್ಯ ಬೇಡ! ಮಕ್ಕಳು ಅವುಗಳ ಪಾಡಿಗೆ ಅವುಗಳಿರಲಿ' ಎಂದು ಕಿರುಚುತ್ತಿದ್ದಳು. ಅಥವಾ 'ಅವು ಬರಿಗಾಲಿನಲ್ಲಿ ಒಳ್ಳೆಯ ಬಟ್ಟೆಗಳಿಲ್ಲದೆ ಓಡಾಡುತ್ತವೆ, ಅವು ಗಳನ್ನು ತಂದುಕೊಡದೆ ಬರಿದೆ ಏಕೆ ಬಯ್ಯುತ್ತೀಯೆ ?' ಎಂದು ಅವನನ್ನೇ ಗದರಿಸುತ್ತಿದ್ದಳು.

ಅವರಿಗೆ ಒಳ್ಳೆಯ ಉಡುಪುಗಳು ಏಕೆ ಬೇಕು? ಈ ದೇಹವನ್ನು ಸಿಂಗರಿಸುವ ಅಗತ್ಯವಾದರೂ ಏನು ? ಎಂದು ಯಾನಿಮೇರ್ ಆಶ್ಚರ್ಯಗೊಳ್ಳುತ್ತಿದ್ದ.

ಯಾನಿಮೇರ್ ಕಟುಕವೃತ್ತಿಯನ್ನವಲಂಬಿಸುವ ಮುನ್ನ ಮನೆಯಲ್ಲಿ ಹೆಚ್ಚು ಇರುತ್ತಿರಲಿಲ್ಲ. ಹೀಗಾಗಿ ಮನೆಯಲ್ಲಿ ಏನಾಗುತ್ತದೆಂದು ಆತನಿಗೆ ತಿಳಿಯುತ್ತಿರಲಿಲ್ಲ. ಈಗ ಆತ ಮನೆಯಲ್ಲೇ ಇರುತ್ತಿದ್ದ. ಮನೆಯಲ್ಲಿ ಎಲ್ಲರೂ ಏನು ಮಾಡುತ್ತಾರೆಂದು ಗಮನಿಸುತ್ತಿದ್ದ. ಹುಡುಗಿಯರು ಅತ್ತಿಹಣ್ಣು ಗಳನ್ನು, ಅಣಬೆಗಳನ್ನೂ ಆರಿಸಿಕೊಂಡು ಬರಲು ಓಡುತ್ತಿದ್ದರು: ಕೆಳವರ್ಗದ ಮಕ್ಕಳ ಜೊತೆ ಸೇರಿ ಆಟವಾಡುತ್ತಿದ್ದರು. ಬದಿರಿನಲ್ಲಿ ಬುಟ್ಟಿಗಳನ್ನು ಮಾಡು ತ್ತಿದ್ದರು. ರಿಟೆದೋಪ್ ಜಾಮ್ ಮಾಡುತ್ತಿದ್ದಳು. ದರ್ಜಿಗಳು ಅಳತೆ ತೆಗೆದು ಕೊಳ್ಳಲು ಮನೆಗೆ ಬರುತ್ತಿದ್ದರು. ಶೂ ತಯಾರಿಸುವವರೂ ಬಂದು ಅಳತೆ ತೆಗೆದುಕೊಂಡು ಹೋಗುತ್ತಿದ್ದರು. ರಿಟೆದೋಪ್ ಹಾಗೂ ಅವಳ ತಾಯಿ

ಬಾಷ್‌ಳ ಮದುವೆಯ ಬಗ್ಗೆ, ವರದಕ್ಷಿಣೆಯ ಬಗ್ಗೆ ಚರ್ಚಿಸುತ್ತಿದ್ದರು. ಸಿಲ್ಕ್‌ಕೋಟು, ತುಪ್ಪಳದ ಟೋಪಿ, ವೆಲ್ವೆಟ್ ಉಡುಪುಗಳು–ಇತ್ಯಾದಿಗಳೆಲ್ಲದರ ಬಗ್ಗೆ ಮಾತುಗಳಿರುತ್ತಿದ್ದುವು.

ಎಚ್ಚರವಾಗಿ ಮಲಗಿರುತ್ತಿದ್ದಾಗ ಈ ಎಲ್ಲ ಮಾತುಗಳೂ ಅವನ ಕಿವಿಯಲ್ಲಿ ಪ್ರತಿಧ್ವನಿಗೊಳ್ಳುತ್ತಿದ್ದುವು. ಯಾನಿಮೇರ್ ಇತ್ತೀಚೆಗೆ ಹೆಚ್ಚು ಹಣ ಸಂಪಾದಿಸುತ್ತಿದ್ದುದರಿಂದ ಅವರೆಲ್ಲರೂ ಶ್ರೀಮಂತಿಕೆಯಲ್ಲಿ ತೇಲಾಡುತ್ತಿದ್ದರು. ರಿಟೆದೋಪ್‌ಳ ಗರ್ಭದಲ್ಲಿ ಮತ್ತೊಂದು ಮಗು ಬೆಳೆಯುತ್ತಿತ್ತು. ಈ ಬಾರಿಯೂ ಹೆಣ್ಣುಮಗುವೇ ಆಗುತ್ತದೆಂದು ಯಾನಿಮೇರ್‌ಗೆ ಅನ್ನಿಸುತ್ತಿತ್ತು. 'ದೇವರು ಏನು ಕೊಡುತ್ತಾನೋ ಅದನ್ನು ಸ್ವೀಕರಿಸಬೇಕು' ಎಂದು ಆತ ಸಮಾಧಾನಗೊಳ್ಳಲು ಯತ್ನಿಸುತ್ತಿದ್ದ.

ಯಾನಿಮೇರ್ ಮೈ ತುಂಬ ಹೊದ್ದುಕೊಂಡ. ಸೆಕೆಯಾಯಿತು. ತಲೆ ಒತ್ತಿದಂತಾಯಿತು. ಹಕ್ಕಿತುಪ್ಪಳದ ನಡುವೆ ಕಲ್ಲುಗಳಿರುವಂತೆ ಅನ್ನಿಸಿತು. ಯಾನಿಮೇರ್ ಈಗ ಕಾಲು, ಹೊಟ್ಟೆ, ಎದೆ, ಎಲುಬುಗಳು ಇತ್ಯಾದಿಗಳಿಂದ ಕೂಡಿದ ಬರಿಯ ದೇಹ ಮಾತ್ರವಾಗಿ ಮಲಗಿದ್ದ. ಕರುಳಿನಲ್ಲಿ ಏನೋ ಚುಚ್ಚಿದಂತಾಗುತ್ತಿತ್ತು. ನಾಲಗೆ ಒಣಗಿತು.

ಯಾನಿಮೇರ್ ಎದ್ದು ಕುಳಿತ. 'ಓ ದೇವರೇ ! ನಾನು ಬದುಕಲಾರೆ,' ಎಂದು ನಿಟ್ಟುಸಿರು ಬಿಟ್ಟ.

೨

ಎಲುಲ್ ತಿಂಗಳು ಶೂನ್ಯಮಾಸ ಅಥವಾ ಪಶ್ಚಾತ್ತಾಪದ ತಿಂಗಳು ಎಂದೂ ಕರೆಯಬಹುದು. ಹಿಂದಿನ ವರ್ಷಗಳಲ್ಲಿ ಎಲುಲ್ ತಿಂಗಳು ಬಂತೆಂದರೆ ಜನ ಹೆಚ್ಚು ಶ್ರದ್ಧಾಭಕ್ತಿಗಳಿಂದಿರುತ್ತಿದ್ದರು. ಗದ್ದೆಗಳಲ್ಲಿ ಕೊಯ್ಲು ಮುಗಿದಿತ್ತು. ಆ ಭಾಗದ ಮರಗಳಿಂದ ಬೀಸುತ್ತಿದ್ದ ಗಾಳಿ ಯಾನಿಮೇರ್‌ಗೆ ಹಿತವಾದ ಅನುಭವ ನೀಡಿತು. ಕಿಟಕಿಯ ಬಳಿ ನಿಂತು ನೀಲಿಯಾಕಾಶದತ್ತ ಬಹು ಹೊತ್ತು ದಿಟ್ಟಿಸುತ್ತಿದ್ದ. ತೇಲುತ್ತಿದ್ದ ಬಿಳಿಯ ಮೋಡಗಳು ಹತ್ತಿ ಸುತ್ತಿದ ಮಾದಲದಂತೆ ಕಾಣಿಸುತ್ತಿದ್ದುವು. ಜೇಡರ ಹುಳುಗಳು ಗಾಳಿಯಲ್ಲಿ ತೇಲುತ್ತಿದ್ದುವು.

ಮರಗಳಲ್ಲಿನ ಎಲೆಗಳು ಹಳದಿ ಬಣ್ಣಕ್ಕೆ ತಿರುಗಿದ್ದವು. ಪಕ್ಷಿಗಳ ಚಿಲಿಪಿಲಿ ಆತನಿಗೆ ದುಃಖದ ದನಿಯಂತೆ ಕೇಳಿಸುತ್ತಿತ್ತು.

ಕಟುಕ ವೃತ್ತಿಯವರಿಗೆ ಎಲುಲ್ ತಿಂಗಳು ಉಳಿದವರಂತಲ್ಲ, ಬೇರೆಯೇ ಆಗಿರುತ್ತದೆ. ಅನೇಕ ಪ್ರಾಣಿಗಳನ್ನು ಹೊಸ ವರ್ಷದ ಆರಂಭಕ್ಕಾಗಿ ಬಲಿಕೊಡುತ್ತಾರೆ. ಪಶ್ಚಾತ್ತಾಪದ ದಿನದ ಹಿಂದಿನ ದಿನ ಪ್ರತಿಯೊಬ್ಬರೂ ಕೋಳಿಯ ಬಲಿ ಕೊಡುವುದು ರೂಢಿ. ಪ್ರತಿಯೊಬ್ಬರ ಮನೆಯಂಗಳವೂ ಕೋಳಿಗಳ ಕೂಗಿನಿಂದ ತುಂಬಿರುತ್ತದೆ. ಇದಾದ ನಂತರ ಒಂದರ ಮೇಲೊಂದು ಹಬ್ಬಗಳು ಬರುತ್ತವೆ. ಆ ಎಲ್ಲ ಹಬ್ಬಗಳಲ್ಲೂ ಕಟುಕರಿಗೆ ಬಿಡುವಿರುವುದಿಲ್ಲ. ಲಕ್ಷಾಂತರ ಪ್ರಾಣಿ ಪಕ್ಷಿಗಳು, ಈಗ ಬದುಕಿರುವಂಥವು, ಆ ದಿನಗಳಲ್ಲಿ ಸಾಯಬೇಕಾಗುತ್ತದೆ.

ಯಾನಿಮೇರ್ ಆ ರಾತ್ರಿ ಮಲಗಲಾಗಲಿಲ್ಲ. ಕಣ್ಣುಮುಚ್ಚಿದರೆ ಅನೇಕ ಭಯಂಕರ ದೃಶ್ಯಗಳು ಕಣ್ಮುಂದೆ ನಿಲ್ಲುತ್ತಿದ್ದುವು. ಪಸುಗಳು ಮನುಷ್ಯನ ರೂಪ ಧರಿಸಿ ನಿಲ್ಲುತ್ತಿದ್ದುವು. ಕರುವನ್ನು ಕೊಲ್ಲಲೆಂದು ಕತ್ತಿಯೆತ್ತಿದರೆ ಅದು ಒಂದು ಸುಂದರ ಹುಡುಗಿಯಾಗಿಬಿಡುತ್ತಿತ್ತು. ಆ ಹುಡುಗಿ ನಡುಗುತ್ತಾ ಜೀವವುಳಿಸಲು ಬೇಡುತ್ತಿದ್ದಳು. ರುಂಡವಿಲ್ಲದ ಮುಂಡ ಓಡಾಡುತ್ತಾ ಅಂಗಳದ ತುಂಬ, ಅಧ್ಯಯನದ ಕೊಠಡಿಯಲ್ಲೆಲ್ಲಾ ರಕ್ತ ಚೆಲ್ಲುತ್ತಿತ್ತು. ಕುರಿಯೊಂದರ ಬದಲು ತನ್ನ ಹೆಂಡತಿ ರಿಟೆದೋಷ್‌ಳ ಕತ್ತನ್ನೇ ಕತ್ತರಿಸಿದಂತೆಯೂ ಆತನಿಗೆ ಕನಸು ಬಿತ್ತು.

ಅಂತಹ ಒಂದು ಕನಸಿನಲ್ಲಿ ಬಲಿಯಾಗಲಿದ್ದ ಮೇಕೆ ಮನುಷ್ಯನಂತೆ ಮಾತನಾಡಿತು. ಆತನತ್ತರಕ್ಕೂ ನೆಗೆದು, ಆತನ ಕತ್ತನ್ನು ಸೀಳಿ ಹೀಬ್ರೂ ಹಾಗೂ ಅರೇಬಿಕ್ ಭಾಷೆಗಳಲ್ಲಿ ಚೆನ್ನಾಗಿ ಬಯ್ಯುತ್ತಿತ್ತು. ಮುಖದ ಮೇಲೆ ಉಗಿದು ಶಪಿಸುತ್ತಿತ್ತು. ಯಾನಿಮೇರ್ ಗಾಬರಿಯಾಗಿ ಎದ್ದು ಕುಳಿತ. ಬೆವರಿನಿಂದ ಸಂಪೂರ್ಣ ಒದ್ದೆಯಾಗಿದ್ದ. ಗಂಟೆ ಬಾರಿಸಿದಂತೆ ಕೋಳಿಯೊಂದು ಜೋರಾಗಿ ಕೂಗಿತು. ಆ ಕೂಗು ಹತ್ತಾಗಿ ನೂರಾಗಿ ಸಾವಿರವಾಗಿ ಯಾನಿಮೇರ್‌ನನ್ನು ಪ್ರಶ್ನಿಸುತ್ತಿದ್ದಂತೆ, ಪ್ರತಿಭಟಿಸುತ್ತಿರುವಂತೆ, ತಮ್ಮ ದುರದೃಷ್ಟಕ್ಕಾಗಿ ಪರಿತಪಿಸುತ್ತಿರುವಂತೆ ಆತನಿಗೆ ಕೇಳಿಸುತ್ತಿತ್ತು.

ಯಾನಿಮೇರ್‌ಗೆ ಮತ್ತೆ ಮಲಗಲು ಸಾಧ್ಯವಾಗಲಿಲ್ಲ. ಎರಡೂ ಕೈಗಳಿಂದ ತಲೆಯನ್ನು ಹಿಡಿದು ಜೋರಾಗಿ ಕೊಡವಿದ. ಅಸ್ವಸ್ಥನಾಗಿ ಎದ್ದು ಕುಳಿತ.

ರಿಟೆದೋಫ್ ಎದ್ದು 'ಏನಾಯಿತು ?' ಎಂದಳು.

'ಏನೂ ಇಲ್ಲ, ಏನೂ ಇಲ್ಲ'

'ಯಾಕೆ ಹಾಗೆ ಮಾಡುತ್ತಿದ್ದೀಯೆ ?'

'ದಯವಿಟ್ಟು ನನ್ನ ಪಾಡಿಗೆ ನನ್ನ ಬಿಡು'

'ನನಗೆ ಹೆದರಿಕೆಯಾಗುತ್ತಿದೆ'

ಸ್ವಲ್ಪ ಹೊತ್ತಿನ ನಂತರ ರಿಟೆದೋಫ್ ಮತ್ತೆ ಗೊರಕೆ ಹೊಡೆಯಲಾರಂಭಿಸಿದಳು. ಯಾನಿಮೇರ್ ಹಾಸಿಗೆಯಿಂದೆದ್ದು ಮುಖ ತೊಳೆದು ಬಟ್ಟೆಹಾಕಿಕೊಂಡ. ಹಣೆಗೆ ವಿಭೂತಿ ಹಚ್ಚಿ ಮಧ್ಯರಾತ್ರಿಯ ಪ್ರಾರ್ಥನಾಮಂತ್ರಗಳನ್ನು ಹೇಳಬಯಸಿದ. ಆದರೆ ತುಟಿಗಳು ಮಂತ್ರಗಳನ್ನು ಹೇಳಲು ನಿರಾಕರಿಸುವಂತೆ ಬಿಗಿದುಕೊಂಡಿದ್ದುವು. ಕಾಲಮಿರ್‌ನಲ್ಲಿ ಕಗ್ಗೊಲೆಗೆ ಸಿದ್ಧನಾಗಿದ್ದು, ತಾನೇ ನೇತಾರನಾಗಿ ಮುಂದೆ ನಿಂತು, ಈಗ ಮಂತ್ರಗಳನ್ನು ಹೇಗೆ ಹೇಳಿಯಾನು ?

ಮನೆಯೊಳಗೆ ಗಾಳಿ ಮೆಲ್ಲಗೆ ತೆವಳುತ್ತಿತ್ತು. ಬೆವರು ಮೂತ್ರಗಳ ದುರ್ಗಂಧದಿಂದ ಕೂಡಿತ್ತು. ಮಕ್ಕಳಲ್ಲೊಬ್ಬಳು ನಿದ್ದೆಯಲ್ಲಿಯೇ ಏನೋ ಮಾತನಾಡಿದಳು. ಮತ್ತೊಬ್ಬಳು ನರಳಿದಳು. ಮಂಚ ಕಿರುಗುಟ್ಟಿ ಶಬ್ದಮಾಡಿತು. ಶೌಚಗೃಹದಲ್ಲಿ ನೀರು ಹರಿಯುತ್ತಿದ್ದ ಸದ್ದಾಗುತ್ತಿತ್ತು. ಪಂಜರದೊಳಗೆ ರಿಟೆದೋಫ್ ಪಶ್ಚಾತ್ತಾಪದ ದಿನಕ್ಕೆಂದು ಬಂಧಿಸಿಟ್ಟಿದ್ದ ಕೋಳಿಗಳಿದ್ದುವು. ಇಲಿಗಳ ಪರಪರ ಕೆರೆಯುವ ಸದ್ದು ಕೇಳಿಸುತ್ತಿತ್ತು. ಮಾಳಿಗೆಯ ಮೇಲೆ ಮರ ಕೊರೆಯುವ ಕೀಟ ನಿರಂತರ ಶಬ್ದ ಮಾಡುತ್ತಿತ್ತು. ಅಸ್ತಿತ್ವಕ್ಕಾಗಿ ತಮ್ಮದೇ ಆದ ರೀತಿಯಲ್ಲಿ ಹೋರಾಡುತ್ತಿದ್ದ ಅನೇಕ ರೀತಿಯ ಜೀವಿಗಳ ಸದ್ದು ಯಾನಿಮೇರ್‌ನ ಕಿವಿತುಂಬಿತು.

ಯಾನಿಮೇರ್ ಅಂಗಳಕ್ಕೆ ಹೋದ. ಅಲ್ಲಿ ಎಲ್ಲವೂ ಪ್ರಶಾಂತವಾಗಿತ್ತು. ಮಧ್ಯರಾತ್ರಿ. ಮಂಜುಬೀಳುತ್ತಿತ್ತು. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದುವು. ಯಾನಿಮೇರ್ ದೀರ್ಘವಾಗಿ ಉಸಿರೆಳೆದುಕೊಂಡ. ಮಂಜುಬಿದ್ದಿದ್ದ ಹುಲ್ಲಿನ ಮೇಲೆ ಸ್ವಲ್ಪದೂರ ನಡೆದುಹೋದ. ಕಾಲುಚೀಲಗಳು ಒದ್ದೆಯಾದವು. ಮರವೊಂದರ ಬಳಿ ನಿಂತುಕೊಂಡ. ಕೊಂಬೆಗಳಲ್ಲಿ ಹಕ್ಕಿಗೂಡುಗಳಿದ್ದುವು. ಎಚ್ಚರವಿದ್ದ ಹಕ್ಕಿಗಳು ಚಿಲಿಪಿಲಿಗುಡುತ್ತಿದ್ದವು. ಬೆಟ್ಟದ ಆ ಬದಿಗೆ ಕಪ್ಪೆಗಳ ವಟವಟ

ಸದ್ದು ಕೇಳಿಸುತ್ತಿತ್ತು. 'ಕಪ್ಪೆಗಳು ಮಲಗುವುದೇ ಇಲ್ಲವೇ ?' ಯಾಸಿಮೇರ್ ತನ್ನನ್ನೇ ತಾನು ಕೇಳಿಕೊಂಡ. 'ಅವುಗಳಿಗೆ ಮನುಷ್ಯರ ಧ್ವನಿಯಿರಬೇಕು.'

ಯಾಸಿಮೇರ್ ಕಟುಕ ವೃತ್ತಿಯನ್ನವಲಂಬಿಸಿದ ಮೇಲೆ ಬದುಕಿರುವ ಎಲ್ಲ ಜೀವಿಗಳ ಬಗ್ಗೆ ಆತ ಚಿಂತಿಸುತ್ತಿದ್ದ. ಅನೇಕ ರೀತಿಯ ಪ್ರಶ್ನೆಗಳ ಸುಳಿಯೊಳಗೆ ಆತ ಮುಳುಗಿ ಹೋಗಿದ್ದ. ಸೊಣಗಳು ಹೇಗೆ ಜನ್ಮ ತಾಳುತ್ತವೆ ? ತಾಯಿಯ ಗರ್ಭದಿಂದಲೇ ಬರುತ್ತವೆಯೋ ಅಥವಾ ಮೊಟ್ಟೆಯೊಡೆದು ಮರಿಯಾಗುತ್ತವೆಯೋ ? ಚಳಿಗಾಲದಲ್ಲಿ ಸೊಳ್ಳೆಗಳೆಲ್ಲ ಸತ್ತು ಹೋದರೆ ಬೇಸಿಗೆಯಲ್ಲಿ ಮತ್ತೆ ಸೊಳ್ಳೆಗಳು ಎಲ್ಲಿಂದ ಬರುತ್ತವೆ ? ದೇವಾಲಯದ ಚಾವಣಿಯ ತುದಿಯಲ್ಲಿ ಗೂಡುಕಟ್ಟಿರುವ ಗೂಬೆ ಅಪಾರ ಹಿಮ ಸುರಿಯುವಾಗ ಏನು ಮಾಡುತ್ತದೆ ? ಅಲ್ಲಿಯೇ ಇರುತ್ತದೆಯೇ ಅಥವಾ ಬೆಚ್ಚಗಿನ ಪ್ರದೇಶಕ್ಕೆ ಹಾರಿ ಹೋಗುತ್ತದೆಯೇ ? ಯಾವ ಜೀವಿಯೇ ಆಗಲಿ ಬೆಚ್ಚನೆಯ ಹೊದಿಕೆ ಇಲ್ಲದಿದ್ದಾಗ ಅದು ಹೇಗೆ ಜೀವಿಸುತ್ತದೆ ?

ಯಾಸಿಮೇರ್‌ಗೆ ಎಲ್ಲ ರೀತಿಯ ಪ್ರಾಣಿ ಪಕ್ಷಿಗಳು ಜಲಚರಗಳು ಕೀಟಗಳ ಬಗ್ಗೆ ವಿಶೇಷ ಪ್ರೀತಿ ಹುಟ್ಟಿತು. ಇಲಿಗಳು–ಇಲಿಗಳಾಗಿರುವುದು ಅವುಗಳ ತಪ್ಪೇ ? ಅವುಗಳಿಗೆ ಬೇಕಾಗಿರುವುದೇನು ? ಒಂದು ಚೂರು ರೊಟ್ಟಿ ತಾನೇ ? ಅವುಗಳೇನು ತಪ್ಪು ಮಾಡುತ್ತವೆ ? ಅಂಥದರಲ್ಲಿ ಬೆಕ್ಕು ಯಾಕೆ ಅದಕ್ಕೆ ಭಯಂಕರ ಶತ್ರುವಾಗಬೇಕು ?

ಯಾಸಿಮೇರ್ ಹಿಂದಕ್ಕೆ ಬಂದು ಮತ್ತೆ ಕತ್ತಲಿನಲ್ಲಿ ಮುಂದೆ ನಡೆದ. ಧರ್ಮಾಧಿಕಾರಿ ಹೇಳಿದ್ದು ಸರಿಯಿರಬಹುದು. ದೇವರಿಗಿಂತ ಮನುಷ್ಯನಿಗೆ ಹೆಚ್ಚು ಅನುಕಂಪೆ ಇರಬಾರದು ಅಥವಾ ಇರಬಾರದು. ಆದರೂ ಯಾಸಿಮೇರ್‌ನ ಹೃದಯ ಅನುಕಂಪದಿಂದ ತುಂಬಿತು. ಒಂದು ಪ್ರಾಣಿ ಮತ್ತೊಂದನ್ನು ತಿಂದು ಬದುಕುವ ಈ ಜಗತ್ತಿನಲ್ಲಿ ಹೊಸ ವರ್ಷದ ಈ ಸಂದರ್ಭದಲ್ಲಿ ಒಂದು ಜೀವಿ ಚೆನ್ನಾಗಿ ಬದುಕಲು ಹೇಗೆ ಪ್ರಾರ್ಥಿಸಲು ಸಾಧ್ಯ ?

ಎಲ್ಲಿಯವರೆಗೆ ಪ್ರಾಣಿಗಳ ಮೇಲೆ ನಡೆಯುವ ಈ ಹತ್ಯೆಯ ಅನ್ಯಾಯವನ್ನು ನಿಲ್ಲಿಸಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ಸಂತಮೆಸಾಯ್‌ಗೆ ಸಹ ಜಗತ್ತಿನ ನ್ಯೂನತೆಯನ್ನು ಸರಿಪಡಿಸಲು ಸಾಧ್ಯವಿಲ್ಲವೆಂದು ಯಾಸಿಮೇರ್‌ಗೆ

ಅನ್ನಿಸಿತು. ಪ್ರತಿಯೊಂದು ಹಸು, ಕರು, ಮೀನು, ಹಕ್ಕಿ ಯಾವುದೇ ಆಗಿರಲಿ ಎಲ್ಲವೂ ಈ ಹತ್ಯೆಯಿಂದ ತಪ್ಪಿಸಿಕೊಳ್ಳಬೇಕು. ನೆಲದಲ್ಲಿ ತೆವಳಿ ಹೊರಳುವ ಒಂದು ಹುಳುವಿನಲ್ಲಿಯೂ ದೈವಿಕತೆಯ ಅಂಶವಿದೆ. ಒಂದು ಪ್ರಾಣಿಯನ್ನು ಕೊಂದರೆ ದೇವರನ್ನು ಕೊಂದಂತೆಯೇ....

'ದುಃಖದಲ್ಲಿ ನಾನು ಕೊಚ್ಚಿಹೋಗುತ್ತಿದ್ದೇನೆ. ನನ್ನ ಮನಸ್ಸಿನ ಸ್ತಿಮಿತ ತಪ್ಪುತ್ತಿದೆ--' ಯಾನಿಮೇರ್ ತನಗೆ ತಾನೇ ಹೇಳಿಕೊಂಡ.

ಹೊಸ ವರ್ಷದ ಆರಂಭಕ್ಕೆ ಒಂದು ವಾರ ಮುಂಚೆ ಬಲಿಕೊಡಲು ಅಸಾಧ್ಯ ಸಂದಣಿಯಿತ್ತು. ಯಾನಿಮೇರ್ ದಿನವಿಡೀ ಬಲಿಪೀಠದ ಬಳಿ ನಿಂತು ಕೋಳಿಗಳನ್ನು, ರೋಸ್ಟರ್ ಹಕ್ಕಿಗಳನ್ನು, ಬಾತುಕೋಳಿಗಳನ್ನು ಕತ್ತರಿಸುತ್ತಿದ್ದ. ಹೆಂಗಸರು ತಮ್ಮ ಕೋಳಿಗಳನ್ನು ಮೊದಲು ಕತ್ತರಿಸಿಕೊಳ್ಳಲು ವಾದಮಾಡುತ್ತಾ ಪರಸ್ಪರ ತಳ್ಳಾಡುತ್ತಾ ಜಗಳವಾಡುತ್ತಿದ್ದರು. ಕೆಲವರು ತಮಾಷೆ ಮಾಡುತ್ತಾ ನಗುತ್ತಾ ನಿಂತಿದ್ದರು. ಅಂಗಳವೆಲ್ಲ ಕೋಳಿ, ಬಾತುಕೋಳಿಗಳ ತುಪ್ಪಳದಿಂದ ತುಂಬಿತ್ತು. ಎಲ್ಲ ಕಡೆಯಿಂದ ಅವುಗಳ ಕಿರುಚಾಟ ಕೇಳಿಸುತ್ತಿತ್ತು. ಒಮ್ಮೊಮ್ಮೆ ಅವುಗಳ ಕೂಗು ಮನುಷ್ಯರ ಆಕ್ರಂದನದಂತೆಯೇ ಕೇಳಿಸುತ್ತಿತ್ತು.

ಯಾನಿಮೇರ್ ಅಸಾಧ್ಯ ವೇದನೆಯನ್ನನುಭವಿಸುತ್ತಿದ್ದ. ಕಟುಕ ವೃತ್ತಿಗೆ ಕ್ರಮೇಣ ಹೊಂದಿಕೊಳ್ಳಬಹುದೆಂದು ಇದುವರೆಗೂ ಆತ ಭಾವಿಸಿದ್ದ. ಆದರೆ ಇನ್ನು ನೂರು ವರ್ಷಗಳವರೆಗೆ ಇದೇ ವೃತ್ತಿಯಲ್ಲಿದ್ದರೂ ತಾನು ಇದಕ್ಕೆ ಹೊಂದಿಕೊಳ್ಳಲಾರೆನೆಂದು ಆತನಿಗರಿವಾಯಿತು. ಅವನ ಮೊಣಕಾಲುಗಳು ನಡುಗುತ್ತಿದ್ದುವು. ಹೊಟ್ಟೆ ತೊಳಸುತ್ತಿತ್ತು. ಬಾಯಿ ಕಹಿಯಾಯಿತು. ರಿಟೆಮೋಷ್ ಮತ್ತು ಆಕೆಯ ತಂಗಿಯರು ಹೆಂಗಸರೊಡನೆ ಹರಟುತ್ತಾ, ಹೊಸ ವರ್ಷದ ಶುಭಾಶಯ ಕೋರುತ್ತಾ, ಮತ್ತೆ ಮುಂದಿನ ವರ್ಷ ಭೇಟಿಯಾಗುವ ಆಶಯ ವ್ಯಕ್ತಪಡಿಸುತ್ತಾ ಆರಾಮವಾಗಿ ಅಂಗಳದ ತುಂಬ ಅಡ್ಡಾಡುತ್ತಿದ್ದರು.

ಇನ್ನು ಮುಂದೆ ತಾನು ಕಟುಕವೃತ್ತಿಯ ನಿಯಮಗಳ ರೀತ್ಯಾ ಪ್ರಾಣಿಗಳನ್ನು ಕೊಲ್ಲುವುದು ಸಾಧ್ಯವಿಲ್ಲವೆಂದು ಯಾನಿಮೇರ್‌ಗೆ ಅನ್ನಿಸತೊಡಗಿತು. ಒಂದೊಂದು ಕ್ಷಣ ಅವನ ಮುಂದೆ ಸಂಪೂರ್ಣ ಕತ್ತಲು ಕವಿಯುತ್ತಿತ್ತು. ಮರುಕ್ಷಣ ಹಳದಿ ಮಿಶ್ರಿತ ಹಸುರು ಆವರಿಸುತ್ತಿತ್ತು. ಕತ್ತಿಯ ಹರಿತ ತಪ್ಪಿದೆಯೇ ಎಂದು ಆಗಾಗ್ಗೆ ಬೆರಳಿನ ತುದಿಯಿಂದ ಸವರಿ ಪರೀಕ್ಷಿಸುತ್ತಿದ್ದ.

ಹದಿನೈದು ನಿಮಿಷಗಳಿಗೊಮ್ಮೆ ಆತ ಮೂತ್ರಮಾಡಲು ಹೋಗಿಬರುತ್ತಿದ್ದ. ಸೊಳ್ಳೆಗಳು ಕಚ್ಚುತ್ತಿದ್ದವು. ಮರದ ರೆಂಬೆಗಳ ಮೇಲೆ ಕುಳಿತ ಕಾಗೆಗಳು ಆತನತ್ತ ಮುಖಮಾಡಿ ಕೂಗುತ್ತಿದ್ದುವು. ಹೊತ್ತು ಮುಳುಗುವವರೆಗೂ ಯಾನಿಮೇರ್ ಬಲಿಪೀಠದ ಬಳಿಯೇ ಇದ್ದ. ಅಲ್ಲಿಯೇ ಇದ್ದ ಗುಂಡಿಯಲ್ಲಿ ರಕ್ತ ತುಂಬಿ ಹರಿಯುತ್ತಿತ್ತು.

ಸಂಜೆಯ ಪ್ರಾರ್ಥನೆಯ ನಂತರ ರಿಟೆದೋಪ್ ಯಾನಿಮೇರ್‌ಗೆ ಗೋಧಿಯ ಸೂಪ್ ಹಾಗೂ ಹುರಿದ ಮೀನನ್ನು ಕೊಟ್ಟಳು. ಬೆಳಿಗ್ಗೆಯಿಂದ ಆತ ಏನನ್ನೂ ತಿಂದಿರಲಿಲ್ಲ. ಆದರೂ ಈಗ ತಿನ್ನಲಾಗಲಿಲ್ಲ. ತಿಂದ ಮೊದಲ ತುತ್ತೇ ಗಂಟಲಲ್ಲಿ ಸಿಕ್ಕಿದಂತಾಗಿ, ಅದನ್ನು ಆತ ಕಷ್ಟಪಟ್ಟು ನುಂಗಬೇಕಾಯಿತು. ಆತ ಧರ್ಮಗ್ರಂಥ ಪಠಿಸಿ. ಪಾಪ ನಿವೇದನೆ ಮಾಡಿ, ಎದೆಯನ್ನು ಹೊಡೆದು ಕೊಳ್ಳುತ್ತಾ ದೇವರಿಗೆ ಪ್ರಾರ್ಥನೆ ಸಲ್ಲಿಸಿದನು.

ಯಾನಿಮೇರ್ ಆ ರಾತ್ರಿ ತನಗೆ ನಿದ್ದೆ ಬರುವುದಿಲ್ಲವೆಂದು ಭಾವಿಸಿದ್ದ. ಆದರೆ ದಿಂಬಿನ ಮೇಲೆ ತಲೆಯಿಟ್ಟ ತಕ್ಷಣವೇ ಆತನ ಕಣ್ಣುಗಳು ಮುಚ್ಚಿ ಕೊಂಡುವು. ಮಲಗುವ ಮೊದಲು ಆತ ವಿಶೇಷ ಸಂದರ್ಭಗಳಲ್ಲಿ ಹೇಳುವ ಸ್ವಸ್ತಿವಾಚನ ಪಠಿಸಿದ್ದ. ಹಸುವಿನ ಹೊಟ್ಟೆಯನ್ನು ಸೀಳಿ, ಶ್ವಾಸಕೋಶವನ್ನು ಹೊರತೆಗೆದು ಊದಿ, ಅದರಲ್ಲಿನ ಅಶುಚಿಯನ್ನು ಹುಡುಕುತ್ತಿರುವಂತೆ ಆತನಿ ಗೊಂದು ಕನಸುಬಿತ್ತು. ಇದರರ್ಥವೇನು ? ಸಾಮಾನ್ಯವಾಗಿ ಇದು ಆತನ ಕೆಲಸವಲ್ಲ. ಆತ ಊದಿದ ಶ್ವಾಸಕೋಶ ದೊಡ್ಡದಾಗಿ ಬೆಳೆಯುತ್ತಲೇ ಇತ್ತು. ಮೇಜನ್ನೆಲ್ಲಾ ಆಕ್ರಮಿಸಿಕೊಂಡು ಚಾವಣಿಯವರೆಗೂ ಅದು ಬೆಳೆಯುತ್ತಾ ಹೋಯಿತು. ಯಾನಿಮೇರ್ ಊದುವುದನ್ನು ನಿಲ್ಲಿಸಿದ್ದ. ಆದರೆ ಶ್ವಾಸಕೋಶ ಬೆಳೆಯುವುದನ್ನು ನಿಲ್ಲಿಸಲಿಲ್ಲ. ಶ್ವಾಸಕೋಶದ ಮೇಲಿನ ತೆಳುವಾದ ಹಾಲೆ ಬಿರಿಯುತ್ತಾ ಬಿರಿಯುತ್ತಾ ಒಡೆದು ಹೋಗುವಂತೆ ಕಾಣಿಸುತ್ತಿತ್ತು. ಇದ್ದಕ್ಕಿದ್ದಂತೆ ಶ್ವಾಸನಾಳದಿಂದ ಶಿಳ್ಳಿನ ದನಿ, ಕೆಮ್ಮು, ಗೊರಗೊರ ಶಬ್ದ, ಗೋಳಾಟ ಪ್ರಾರಂಭವಾಯಿತು. ನಂತರವೊಟ್ಟು ಮಾತನಾಡಲು ಆರಂಭಿಸಿದ. ಆತ ಹಾಡುತ್ತಿದ್ದ, ಪದ್ಯದ ಸಾಲುಗಳನ್ನು ಹೇಳುತ್ತಿದ್ದ, ತಾಲಮುದ್ ಹಾಗೂ ಜೋಹರ್ ಗ್ರಂಥಗಳ ಸಾಲುಗಳನ್ನು ಉದ್ಧರಿಸುತ್ತಿದ್ದ.

ಶ್ವಾಸಕೋಶಗಳು ಬೆಳೆದು ಅವು ಭಾರೀ ರೆಕ್ಕೆಗಳಂತೆ ಕಾಣಿಸುತ್ತಿದ್ದುವು.

ಪಟಪಟ ಬಡಿಯುತ್ತಿದ್ದುವು. ಯಾನಿಮೇರ್ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಬಾಗಿಲ ಬಳಿ ಒಂದು ಕಪ್ಪು ಗೂಳಿ ನಿಂತಿತ್ತು. ಕೆಂಪು ಕಣ್ಣುಗಳು, ಚೂಪಾದ ಕೊಂಬುಗಳು. ಗೂಳಿ ಒಮ್ಮೆ ಜೋರಾಗಿ ಗುಟುರು ಹಾಕಿ ದವಡೆಯ ತುಂಬ ಇದ್ದ ಹಲ್ಲುಗಳನ್ನು ಕಟಕಟ ಮಸೆದು ಹೊರಟುಹೋಯಿತು.

ಯಾನಿಮೇರ್ ಗಾಬರಿಯಿಂದ ತತ್ತರಿಸುತ್ತ ಎದ್ದ. ಆತನ ದೇಹ ಬೆವರಿನಿಂದ ತೊಯ್ದು ಹೋಗಿತ್ತು. ತಲೆಬುರುಡೆ ಊದಿಕೊಂಡು ಒಳಗೆ ಮರಳು ತುಂಬಿಕೊಂಡಂತೆ ಅನ್ನಿಸುತ್ತಿತ್ತು. ಕಾಲುಗಳು ಒಣ ಹುಲ್ಲಿನ ಮೆದೆಯ ಮಧ್ಯೆ ಸಿಕ್ಕಿಕೊಂಡ ಮರದ ತುಂಡಿನಂತೆ ನಿಷ್ಕ್ರಿಯವಾಗಿದ್ದುವು. ಪ್ರಯತ್ನಪಟ್ಟು ಆತ ಎದ್ದು ಕುಳಿತ. ನಿಲುವಂಗಿಯನ್ನು ತೊಟ್ಟು ಹೊರ ನಡೆದ. ಕತ್ತಲು ಅತ್ಯಂತ ದಟ್ಟವಾಗಿತ್ತು. ಆಗಿಂದಾಗ್ಗೆ ಗಾಳಿ ಎಲ್ಲಿಂದಲೋ ನುಗ್ಗಿಬಂದು, ಯಾರೋ ನಿಟ್ಟುಸಿರಿಡುತ್ತಿರುವಂತೆ ಭಾಸವಾಗುತ್ತಿತ್ತು.

ಬೆನ್ನು ಮೂಳೆಯ ಮೇಲೆ, ಮೇಲಿಂದ ಕೆಳಗೆ ಹಕ್ಕಿಯ ಗರಿಯಿಂದ ಸೂಕ್ಷ್ಮವಾಗಿ ಸವರಿದಂತಾಗಿ ಯಾನಿಮೇರ್‌ನ ಮೈ ಜುಂ ಎಂದಿತು. ಅವನ ಅಂತರಾತ್ಮ ಆತನನ್ನು ಅಪಹಾಸ್ಯ ಮಾಡುತ್ತಿತ್ತು. 'ಧರ್ಮಾಧಿಕಾರಿ ಹೇಳಿದರೇನಾಯಿತು ? ಅದನ್ನು ಪಾಲಿಸಬೇಕೆಂದೇನು ?–ಯಾನಿಮೇರ್ ತನಗೆ ತಾನೇ ಹೇಳಿಕೊಂಡ. 'ಸರ್ವಶಕ್ತನಾದ ಭಗವಂತನೇ ವಿಧಿಸಿದರೂ ಪಾಲಿಸಬೇಕೆಂದೇನು? ನನಗೆ ಯಾವುದೇ ಪ್ರತಿಫಲ ಬೇಡ. ಪ್ರತಿಫಲಾಪೇಕ್ಷೆಯಿಲ್ಲದೆ ನಾನು ದುಡಿಯುತ್ತೇನೆ. ನನಗೆ ಸ್ವರ್ಗ ಬೇಡ, ಅತುಲೈಶ್ವರ್ಯ ಬೇಡ, ಅಸಾಮಾನ್ಯ ಶಕ್ತಿಬೇಡ. ನನ್ನನ್ನು ಅಲ್ಲಿ, ಪರಲೋಕದಲ್ಲಿ ಮುಳ್ಳಿನ ಮೇಲೆ ಮಲಗಿಸಿದರೂ ಚಿಂತೆಯಿಲ್ಲ. ನೇಣು ಹಾಕಿದರೂ ಅಡ್ಡಿಯಿಲ್ಲ. ದೇವರೇ ! ನಿನ್ನ ಯಾವುದೇ ಉಪಕಾರ, ಅನುಗ್ರಹ ನನಗೆ ಬೇಡ. ಇನ್ನು ಮುಂದೆ ನಿನ್ನ ಆಜ್ಞೆಗಳಿಗೆ ನಾನು ಹೆದರುವುದಿಲ್ಲ, ನಾನೊಬ್ಬ ದ್ರೋಹಿಯೆಂದುಕೋ !' ಯಾನಿಮೇರ್ ಜೋರಾಗಿ ಕಿರುಚಿದ. ದೇವರಿಗಿಂತ ನನಗೆ ಹೆಚ್ಚು ಅನುಕಂಪೆಯಿದೆ, ಹೆಚ್ಚಿದೆ, ಹೆಚ್ಚಿದೆ, ತುಂಬಾ ಹೆಚ್ಚಿದೆ. ಆತ ಕ್ರೂರಿ ದೇವರು, ಯುದ್ಧಕ್ಕೆ ಕಾರಣನಾಗುವಂಥವನು, ಸೇಡನ್ನು ಬಿತ್ತುವಂಥವನು, ಆತನಿಗೆ ನಾನು ಸೇವೆ ಸಲ್ಲಿಸಲಾರೆ, ಆತನದೊಂದು ದುರ್ಮಾರ್ಗ ಪ್ರಪಂಚ !' ಯಾನಿಮೇರ್ ಜೋರಾಗಿ ನಗುತ್ತಿದ್ದ. ಆದರೆ ಆತನ ಕೆನ್ನೆಯ ಮೇಲೆ ಕಣ್ಣೀರು ಧಾರೆಯಾಗಿ ಸುರಿಯುತ್ತಿತ್ತು.

ಯಾನಿವೇರ್ ತನ್ನ ಚಾಕು, ಸಾಣೆಕಲ್ಲು, ಪರಿಕರ್ತನ ಚಾಕು–ಎಲ್ಲವನ್ನೂ ಇಟ್ಟಿದ್ದ ಉಗ್ರಾಣಕ್ಕೆ ಹೋದ. ಅವೆಲ್ಲವನ್ನೂ ತೆಗೆದುಕೊಂಡು ಹೋಗಿ ಅಂಗಳದಿಂದಾಚೆಯ ಬಾವಿಯಲ್ಲಿ ಬಿಸಾಕಿದ. ತಾನು ದೈವದ್ರೋಹದ ಕೆಲಸ ಮಾಡುತ್ತಿದ್ದೇನೆಂದು, ಪವಿತ್ರವಾದ ಸಲಕರಣೆಗಳನ್ನು ಬಿಸಾಡುವುದರ ಮೂಲಕ ಹುಚ್ಚು ಕೆಲಸ ಮಾಡುತ್ತಿದ್ದೇನೆಂದು ಅತನಿಗೆ ಗೊತ್ತಿತ್ತು. ಆದರೆ ಅತನಿಗೆ ಇನ್ನೂ ಒಳ್ಳೆಯವನಾಗಿ ಬದುಕುವುದರಲ್ಲಿ ಆಸೆಯಿರಲಿಲ್ಲ.

ಯಾನಿವೇರ್ ಮನೆಬಿಟ್ಟು ನದಿಯತ್ತ, ಕಾಡಿನತ್ತ ಹೆಜ್ಜೆ ಹಾಕಿದ. ಪ್ರಾರ್ಥನಾಶಾಲು, ಮೇಲುಹೊದಿಕೆ ಯಾವುದರ ಅಗತ್ಯವೂ ಅವನಿಗಿರಲಿಲ್ಲ. ಮೇಲು ಹೊದಿಕೆಯನ್ನಿಡುವ ಚೀಲ ಕರುವಿನ ಚರ್ಮದಿಂದ ಮಾಡಿದ್ದು; ತೋರಾ ಗ್ರಂಥದ ಹಾಳೆಗಳೇ ಚರ್ಮದ್ದು. 'ಸ್ವರ್ಗದಲ್ಲಿರುವ ಓ ದೇವರೇ, ನೀನೂ ಒಬ್ಬ ಮಹಾಕಟುಕ !' ಯಾನಿವೇರ್‌ನ ಒಳದನಿ ಕಿರುಚಿತು. ಇಡೀ ಪ್ರಪಂಚವೇ ಒಂದು ಕಸಾಯಿಖಾನೆಯಂತೆ ಅವನಿಗೆ ತೋರಿತು.

ದಾರಿಯಲ್ಲಿ ಯಾನಿವೇರ್‌ನ ಒಂದು ಚಪ್ಪಲಿ ಬಿದ್ದು ಹೋಯಿತು. ಅತ ಅದನ್ನು ಹಾಗೇ ಬಿಟ್ಟು ಒಂಟಿ ಚಪ್ಪಲಿಯಲ್ಲಿಯೇ ನಡೆಯುತ್ತಿದ್ದ. ಅತ ಆಗಾಗ್ಗೆ ಕಿರುಚುತ್ತಿದ್ದ. ಹಾಡುತ್ತಿದ್ದ ಯಾನಿವೇರ್ ಈಗ ಮತ್ತಷ್ಟು ಕ್ರಾಂತಿಕಾರಿಯಾದ. ತಲೆಯ ಮೇಲಿನ ಟೋಪಿಯನ್ನು ತೆಗೆದು ಬಿಸಾಕಿದ. ರೇಷ್ಮೆಯ ಪ್ರಾರ್ಥನಾ ಬಟ್ಟೆಯನ್ನೂ ಹರಿದೆಸೆದ. ಎಲ್ಲದರಿಂದ ತಪ್ಪಿಸಿಕೊಳ್ಳು ವಂತಹ ವಿಚಿತ್ರಶಕ್ತಿ ಅತನ ಮೈತುಂಬಿತ್ತು.

ನಾಯಿಗಳು ಅವನ ಬೆನ್ನಟ್ಟಿದ್ದುವು. ಜೊಗಳೆ ಆಕ್ರಮಣ ಮಾಡುತ್ತಿ ದ್ದುವು. ಆತ ಅವುಗಳನ್ನು ಓಡಿಸಲು ಪ್ರಯತ್ನಿಸುತ್ತಿದ್ದ. ಸುತ್ತಮುತ್ತಲ ಮನೆ ಗಳ ಬಾಗಿಲು ತೆರೆದುವು. ಬರಿಗಾಲಿನಲ್ಲಿಯೇ ಜನಗಳೆಲ್ಲ ಓಡಿಬಂದರು. ಹೆಂಗಸರು ತಮ್ಮ ರಾತ್ರಿಯುಡುಪಿನಲ್ಲಿಯೇ ಹೊರಬಂದರು. ಎಲ್ಲರೂ ಗದ್ದಲವೆಬ್ಬಿಸುತ್ತಾ ಯಾನಿವೇರ್‌ನ ದಾರಿಗೆ ಅಡ್ಡನಿಂತು ಅತನನ್ನು ತಡೆಯಲೆತ್ನಿಸಿದರು. ಆದರೆ ಅತ ಅವರನ್ನು ಲಕ್ಷಿಸದೆ ಮುಂದೆ ಮುಂದೆ ಹೋಗುತ್ತಲೇ ಇದ್ದ. ಆಕಾಶ ರಕ್ತವರ್ಣಕ್ಕೆ ತಿರುಗಿತ್ತು. ಸೂರ್ಯ ತಾಯಿಯ ಗರ್ಭದಿಂದ ಹೊರಬಂದ ಮಗುವಿನಂತೆ ಕಾಣಿಸುತ್ತಿದ್ದ.

ಕೆಲವರು ಓಡಿಹೋಗಿ ಯಾನಿವೇರ್‌ಗೆ ಹುಚ್ಚು ಹಿಡಿದಿದೆಯೆಂದು

ಕೆಸಾಯಿಖಾನೆಯ ಇತರರಿಗೆ ತಿಳಿಸಿದರು. ಅವರೆಲ್ಲರೂ ಹಗ್ಗ ಹಾಗೂ ಕೋಲು ಗಳೊಂದಿಗೆ ಓಡಿಬಂದರು. ಆದರೆ ಅಷ್ಟರಲ್ಲಿ ಯಾನಿಮೇರ್ ಸೇತುವೆ ದಾಟಿ, ಅದರಾಚೆಯ ಹೊಲಗಳ ಮಧ್ಯೆ ಹೋಗುತ್ತಿದ್ದ. ಬೀಳುತ್ತಾ ಏಳುತ್ತಾ ಮುಂದೆ ಮುಂದೆ ಹೋಗುತ್ತಿದ್ದ. ಆಗಾಗ್ಗೆ ಓಡುತ್ತಿದ್ದ. ತಿಂದದ್ದೆಲ್ಲವನ್ನೂ ವಾಂತಿ ಮಾಡಿಕೊಂಡ. ಆ ಕಡೆಯಿಂದ ಬರುತ್ತಿದ್ದ ಕುದುರೆ ಸವಾರರು ಆತನನ್ನು ನೋಡಿ ಅಣಕಿಸುತ್ತ ಕುದುರೆ ಲದ್ದಿಯನ್ನು ಆತನತ್ತ ಎಸೆದರು. ಹುಲ್ಲುಗಾವಲಿನಲ್ಲಿದ್ದ ಹಸುಗಳು ಅವನನ್ನು ಅಟ್ಟಿಸಿಕೊಂಡು ಹೋದವು. ಅವುಗಳ ಕತ್ತಿಗೆ ಕಟ್ಟಿದ್ದ ಗಂಟೆ ಅಗ್ನಿಶಾಮಕ ವಾಹನದ ಸದ್ದಿನಂತೆ ಕೇಳಿಸುತ್ತಿತ್ತು.

ಓಡುತ್ತಿರುವ ಜನಗಳ ಹೆಜ್ಜೆಯ ಸದ್ದು, ಕೂಗಾಟ ಕಿರುಚಾಟಗಳೆಲ್ಲ ಯಾನಿಮೇರ್‌ಗೆ ಕೇಳಿಸುತ್ತಿತ್ತು. ಇಳಿಜಾರು ಪ್ರದೇಶವನ್ನು ದಾಟಿ ಆತ ಬೆಟ್ಟದ ಬುಡಕ್ಕೆ ಬಂದ. ಹರಿಯುವ ತೊರೆ, ಬಂಡೆಗಳು ಹಾಗೂ ದಟ್ಟ ಮರಗಳಿದ್ದ ಕಾಡಿನ ನಡುವೆ ಆತ ಬಂದಿದ್ದ. ತನ್ನ ಎದುರಿಗೆ ಹರಿಯುತ್ತಿದ್ದ ನದಿ, ಅದು ನದಿಯಲ್ಲ, ರಕ್ತಮಿಶ್ರಿತ ಕೊಳಚೆ ನೀರಿನ ಗಟಾರ ಎಂದು ಯಾನಿಮೇರ್‌ಗೆ ಅನ್ನಿಸಿತು. ಅನೇಕ ಪ್ರಾಣಿಗಳು ದ್ವೇಷದಿಂದ ಆತನ ಮೈಮೇಲೆ ಬಿದ್ದುವು. ಯಾನಿಮೇರ್‌ಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಪ್ರತಿಯೊಂದು ಹೊಡೆತಕ್ಕೂ, ಪ್ರತಿಯೊಂದು ಗಾಯಕ್ಕೂ, ಕಿತ್ತ ಪ್ರತಿಯೊಂದು ಪುಕ್ಕಕ್ಕೂ ಪ್ರತೀಕಾರ ತೆಗೆದು ಕೊಳ್ಳುವಂತೆ ಅಸಂಖ್ಯಾತ ಪ್ರಾಣಿ ಪಕ್ಷಿಗಳು ಆತನನ್ನು ಸುತ್ತುವರಿದುವು. 'ಎಲ್ಲರಿಗೂ ಕೊಲ್ಲುವ ಹಕ್ಕಿದೆ, ಪ್ರತಿಯೊಬ್ಬರೂ ಕೊಲ್ಲಬಹುದು' ಎಂದು ಅವು ರಕ್ತಸಿಕ್ತ ಗಂಟಲಿನಿಂದ ಒಂದೇ ದನಿಯಲ್ಲಿ ಘೋಷಿಸುತ್ತಿದ್ದುವು.

ಯಾನಿಮೇರ್ ಜೋರಾಗಿ ಅಳಲಾರಂಭಿಸಿದ. ಅವನ ಅಳು ಹಲವು ಧ್ವನಿಗಳಾಗಿ ಕಾಡಿನ ನಡುವೆ ಪ್ರತಿಧ್ವನಿಸುತ್ತಿತ್ತು. ತನ್ನ ಮುಷ್ಟಿಯನ್ನು ಆಕಾಶಕ್ಕೆ ಗುರಿಮಾಡಿ ಆತ 'ಕ್ರೂರಿ, ಕೊಲೆಗಾರ, ಆಕ್ರಮಣಕಾರಿ ಮೃಗ' ಎಂದು ಕೂಗುತ್ತಿದ್ದ.

ಎರಡು ದಿನಗಳು ಎಲ್ಲರೂ ಯಾನಿಮೇರ್‌ಗಾಗಿ ಹುಡುಕಾಡಿದರು. ಆತ ಸಿಗಲಿಲ್ಲ. ನೀರುಯಂತ್ರದ ಒಡೆಯನಾದ ಜೆಸಿಲ್ ಪಟ್ಟಣಕ್ಕೆ ಬಂದವನು

ಸುದ್ದಿಯೊಂದನ್ನು ತಂದಿದ್ದ : 'ಯೂಸಿಮೇರ್‌ನ ದೇಹ ಅಣೆಕಟ್ಟೆಯ ನೀರಿನಲ್ಲಿ ಸಿಕ್ಕಿದೆ. ಆತ ನೀರಿನಲ್ಲಿ ಮುಳುಗಿ ಸತ್ತಿದ್ದಾನೆ. !

ಅಂತ್ಯಸಂಸ್ಕಾರ ಮಾಡಲು ಹೆಣ ತರಲು ತಕ್ಷಣ ಜನ ಓಡಿದರು. ಯೂನಿಮೇರ್ ಹುಚ್ಚನಂತೆ ನಡೆದುಕೊಂಡಿದ್ದಕ್ಕೆ ಅನೇಕ ಸಾಕ್ಷ್ಯಾಧಾರಗಳಿದ್ದುದರಿಂದ ಆತ ಆತ್ಮಹತ್ಯೆ ಮಾಡಿಕೊಂಡಿಲ್ಲವೆಂದು ಧರ್ಮಾಧಿಕಾರಿ ತೀರ್ಪು ನೀಡಿದ. ಯೂನಿಮೇರ್‌ನ ದೇಹವನ್ನು ಶುಚಿಮಾಡಿ, ಅವನ ತಂದೆ ತಾತಂದಿರ ಸಮಾಧಿಯ ಬಳಿಯೇ ಇವನ ಸಂಸ್ಕಾರವನ್ನೂ ನೆರವೇರಿಸಲಾಯಿತು. ಸ್ವತಃ ಧರ್ಮಾಧಿಕಾರಿಯೇ ಶೋಕ ಮಂತ್ರವನ್ನು ಪಠಿಸಿದ.

ರಜಾ ದಿನಗಳಾದ್ದರಿಂದ, ಕಾಲವೀರ್ ಮಾಂಸವಿಲ್ಲದೆ ಇರಬೇಕಾಗಿ ಬರುವ ಅಪಾಯವಿದ್ದುದರಿಂದ, ಜನಾಂಗದ ಮುಖ್ಯರು ಹೊಸ ಕಟುಕನೊಬ್ಬನನ್ನು ಕರೆತರಲು ಇಬ್ಬರು ವ್ಯಕ್ತಿಗಳನ್ನು ಆತುರಾತುರವಾಗಿ ಕಳಿಸಿಕೊಟ್ಟರು.

# ಒಂದು ಗಿಳಿಯ ಕತೆ

ಹೊರಗೆ ಚಂದ್ರ ಬೆಳಗುತ್ತಿದ್ದ. ಆದರೆ ಒಳಗೆ, ಜೈಲಿನ ಕೋಣೆಯೊಳಗೆ ಕತ್ತಲು ತುಂಬಿತ್ತು. ಇದ್ದ ಒಂದೇ ಒಂದು ಕಿಟಕಿಗೆ ತಂತಿ ಜಾಲರಿ ಹಾಕಿ ಪರದೆಯನ್ನು ಇಳಿಬಿಟ್ಟಿದ್ದರು. ಅಲ್ಪಸ್ವಲ್ಪ ಒಳತೂರಿದ ಬೆಳಕಿನಿಂದಾಗಿ ಒಳಗೆ ಕುಳಿತವರ ಮುಖಗಳು ಅಸ್ಪಷ್ಟವಾಗಿ ಕಾಣುತ್ತಿದ್ದವು. ದಟ್ಟ ಮಂಜಿನ ನಡುವೆ ಆಕಾಶದ ಒಂದು ಭಾಗ ಹೊಂಬಣ್ಣದಿಂದ ಕೂಡಿತ್ತು. ಕಿಟಕಿಯೊಳತೂರಿದ ಬೆಳಕು ಗೋಡೆಯ ಮೇಲೆ ಜರಡಿ ಹರಡಿತ್ತು. ಮಧ್ಯರಾತ್ರಿಯ ಸಮಯದಲ್ಲಿ ಬಯಲಿನಲ್ಲಿರಬಹುದಾದಂತಹ ಛಳಿ ಕೋಣೆಯೊಳಗೂ ಇದ್ದು ಒಳಗೆ ಕುಳಿತಿದ್ದವರು ನಡುಗುತ್ತಿದ್ದರು. ಕೈದಿಗಳೆಲ್ಲ ಹಳೆಯ ಕೋಟು ಜಾಕೆಟ್‌ಗಳಿಂದ ಸಾಕಷ್ಟು ಮೈ ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದರು. ತಲೆಗೆ ಟೋಪಿ, ಕಾಲಿಗೆ ಶೂ ಹಾಕಿ ಬೆಚ್ಚಗಾಗಲು ಯತ್ನಿಸುತ್ತಿದ್ದರು. ಬೇಸಿಗೆಯ ದಿನಗಳಲ್ಲಿದ್ದ ಕೆಟ್ಟ ವಾಸನೆಯನ್ನು ಛಳಿಗಾಲದ ಗಾಳಿ ಹೊಡೆದೋಡಿಸಿ ವಾತಾವರಣ ತಿಳಿಯಾಗಿತ್ತು. ಮಧ್ಯಾಹ್ನ ಮೂರು ಗಂಟೆಗೇ ಕತ್ತಲು ಕವಿಯುತ್ತಿತ್ತು. ಆರು ಗಂಟೆಗೆ ಸರಿಯಾಗಿ ಕಾವಲುಗಾರ ಸ್ಟಾಚ್ ಸೀಮೆ ಎಣ್ಣೆ ದೀಪ ತಂದಿಡುತ್ತಿದ್ದ. ಕೈದಿಗಳು ಮಲಗುವವರೆಗೂ ಮಾತನಾಡುತ್ತಿದ್ದರು. ನಂತರ ಏಳುವವರೆಗೂ ಗೊರಕೆ ಹೊಡೆಯುತ್ತಿದ್ದರು.

ಮೊದಲು ಎದ್ದವನು ಲೈಬೆಲ್. ಅವನೊಬ್ಬ ಕಳ್ಳ. ಮದುವೆಯಾಗಿತ್ತು. ಮಕ್ಕಳೂ ಇದ್ದರು. ಎದ್ದವನೇ ಗಂಟೆಯಂತೆ ಸದ್ದು ಮಾಡಿ ಆಕಳಿಸಿದ. ನಂತರ ಎದ್ದ ಮಾಟೆಲ್ ದೊಡ್ಡದಾಗಿ ತೇಗಿದ. ಆಮೇಲೆ ಎಚ್ಚರಗೊಂಡ ಬೆರೀಲ್

ಏದ್ದವನೇ ನೇರ ಮೂತ್ರ ಮಾಡಲು ನಡೆದ. ಈ ಮೂವರೂ ಸುಮಾರು ತಿಂಗಳುಗಳಿಂದ ಅಲ್ಲಿದ್ದರು. ಒಬ್ಬರಿಗೊಬ್ಬರು ತಮ್ಮ ಕತೆಗಳನ್ನು ಹೇಳಿಕೊಳ್ಳುವಷ್ಟು ಹತ್ತಿರದವರಾಗಿದ್ದರು. ಆದರೆ ಈ ಬೇಗೆಗ್ಗೆ ಅವರ ನಡುವೆ ಒಬ್ಬ ಹೊಸ ಕೈದಿ ಬಿದ್ದ. ಭಾರೀ ಆಸಾಮಿ. ದೋಂಡಮೂಗು, ನೇರವಾದ ಕತ್ತು ಹಾಗೂ ದಪ್ಪ ಮೀಸೆಯ ಆತ ಹೊಸ ಜಾಕೆಟ್ ತೊಟ್ಟಿದ್ದ, ಬಿಗಿಯಾದ ಎತ್ತರದ ಅಟ್ಟೆಯ ಶೂ ಹಾಕಿದ್ದ. ತಲೆಯಲ್ಲಿ ತುಪ್ಪಳದಂಚಿನ ಟೋಪಿಯಿತ್ತು. ಆತ ದಪ್ಪ ಜೋಡಿ ರಗ್ಗನ್ನು ಜೊತೆಗೆ ತಂದಿದ್ದ, ಅಲ್ಲದೆ ಹೊಸ ಶೂಗಳ ಜೊತೆಯೊಂದು ಅವನ ಹೆಗಲಲ್ಲಿ ತೂಗಾಡುತ್ತಿತ್ತು. ಆತ ಗಣ್ಯ ವ್ಯಕ್ತಿಯಂತಿದ್ದು, ಪೋಲೀಸರಲ್ಲಿ ಪ್ರಭಾವವಿರುವಂತೆ ಕಾಣಿಸುತ್ತಿದ್ದ. ಆತನೊಬ್ಬ ಸುಸಂಸ್ಕೃತನಿರಬೇಕೆಂದು ಅವರು ಭಾವಿಸಿದರು. ಕಳ್ಳರಿಗೆ ಸಹಜವಾದ ಭಾಷೆಯಲ್ಲಿ ಆ ಬಗ್ಗೆ ಮಾತನಾಡಿಕೊಂಡರು. ಆತನೊಬ್ಬ ಜ್ಯೂ ಆಗಿದ್ದು ಹೆಚ್ಚು ಮಾತನಾಡದ, ಏಕಾಂತ ಬಯಸುವ ಮೌನಿಯಾಗಿದ್ದ. ಅವರು ಆತನನ್ನು ಮಾತನಾಡಿಸಲು ಪ್ರಯತ್ನಿಸಿದ್ದರು. ಆದರೆ ಆತ ಹೆಚ್ಚು ಮಾತನಾಡಿರಲಿಲ್ಲ. ಬೆಂಚಿನ ಮೇಲೆ ಮೈಚಾಚಿ ಗಂಟೆಗಟ್ಟಲೆ ಒಂದೂ ಮಾತನಾಡದೆ ಹಾಗೇ ಮಲಗಿದ್ದ. ಕಾವಲುಗಾರ ಸ್ಟಾಚ್ ತಿನ್ನಲು ಒಂದಿಷ್ಟು ಕಪ್ಪು ಬ್ರೆಡ್ ಹಾಗೂ ಕುಡಿಯಲೊಂದಿಷ್ಟು ಕಾಪಾಪಾನೀಯವನ್ನು ತಂದಿಟ್ಟ. ಆದರೆ ಆತ ಅದನ್ನು ತಿನ್ನುವ ಆತುರವನ್ನೇನೂ ಪ್ರಕಟಿಸಿರಲಿಲ್ಲ. 'ಏನು, ನಿನ್ನ ಒಂದು ಮಾತು ಒಂದು ಚಿನ್ನದ ನಾಣ್ಯವೋ ? ಅಲ್ಲ !–ಲೈಬೆಲ್ ಕೇಳಿದ.

ಅದಕ್ಕವನು ಉತ್ತರಿಸಿದ : 'ಎರಡು ನಾಣ್ಯಗಳು'

ಆತನನ್ನು ಮಾತಿಗೆಳೆಯುವುದರಲ್ಲಿ ಅವರು ವಿಫಲರಾದರು.

'ಇರಲಿ, ಈ ದೊಡ್ಡ ಮನುಷ್ಯ ಕ್ರಮೇಣ ತಾನೇ ಹಾದಿಗೆ ಬರುತ್ತಾನೆ' ಎಂದ ಮಾಟೇಲ್. ಹೊಸಬ ದುರ್ಬಲನಾಗಿದ್ದಲ್ಲಿ ಅವನನ್ನು ಹೇಗೆ ಮಾತನಾಡಿಸಬೇಕೆಂದು ಇವರಿಗೆ ಗೊತ್ತಿತ್ತು. ಆದರೆ ಆತನಿಗೆ ಬಲವಾದ ಭುಜಗಳೂ ಜಟ್ಟಿಕೈಗಳೂ ಇದ್ದವು. ಅಂತಹ ಮನುಷ್ಯ ಚಾಕು ಇಟ್ಟಿರುವ ಸಾಧ್ಯತೆಯನ್ನೂ ಅಲ್ಲಗಳೆಯುವಂತಿರಲಿಲ್ಲ. ಬೆಳಕಿರುವವರೆಗೂ ಲೈಬೆಲ್, ಮಾಟೆಲ್ ಹಾಗೂ ಬೆರೀಲ್ ಅರವತ್ತಾರರ ಆಟವನ್ನಾಡಿದರು. ನಂತರ ಅವರು ಭಾರವಾದ ಹೃದಯದೊಂದಿಗೆ ಮಲಗಿದರು. ಜೈಲಿನಲ್ಲಿನ ಕೈದಿ ತಾನೊಬ್ಬ ದೊಡ್ಡ

ಮನುಷ್ಯನೆಂದು ತಿಳಿಯುವುದು ಉಚಿತವಲ್ಲ. ಒಂದಲ್ಲ ಒಂದು ದಿನ ಆತನಿಗೆ ಆ ಭ್ರಮೆ ಹೋಗಲೇಬೇಕಾಗುತ್ತದೆ.

ಈಗ ಆ ಮೂವರೂ ಸದ್ದಿಲ್ಲದೆ ಮೌನವಾಗಿ ಅಪರಿಚಿತನನ್ನೇ ಗಮನಿಸುತ್ತಿದ್ದರು. ಆತ ಗೊರಕೆ ಹೊಡೆಯುತ್ತಿದ್ದಿಲ್ಲವಾದುದರಿಂದ ನಿದ್ದೆ ಮಾಡುತ್ತಿದ್ದಾನೋ, ಎಚ್ಚರವಾಗಿದ್ದಾನೋ ಹೇಳುವುದು ಕಷ್ಟವಾಗಿತ್ತು. ಆಡಿದ ಕೆಲವು ಮಾತುಗಳಲ್ಲಿ ಆತ 'ರ'ವನ್ನು ಒತ್ತಿ ಉಚ್ಚರಿಸುತ್ತಿದ್ದುದರಿಂದ ಲುಬ್ಲಿನ್‌ನ ಸುತ್ತಮುತ್ತಲಿನವನಲ್ಲವೆನ್ನಿಸುತ್ತಿತ್ತು. ಬಹುಶಃ ವಿಸ್ತುಲಾದ ಆ ಭಾಗದಿಂದ, ಪ್ರೋಲೆಂಡಿನಿಂದ ಬಂದಿರಬೇಕು. ಹಾಗಾದರೆ ಈತ ಯಾನೆವ್ ಜೈಲಿನಲ್ಲಿ ಏನು ಮಾಡಿದ್ದಿರಬಹುದು ? ಇದ್ದಕ್ಕಿದ್ದಂತೆ ಇಷ್ಟೊಂದು ದೂರ ಕಳಿಸಲಾರರು. 'ಈಗ ಗಂಟೆಯೆಷ್ಟಾಗಿರಬಹುದು ?'–ಮಾಟೆಲ್ ಮೊದಲು ಮೌನಮುರಿದ. ಯಾರೂ ಉತ್ತರಿಸಲಿಲ್ಲ. 'ರೂಸ್ಟರ್‌ಗೆ ಏನಾಯಿತು ? ಕೂಗುವುದನ್ನು ನಿಲ್ಲಿಸಿಬಿಟ್ಟಿದೆ' ಆತನೇ ಮತ್ತೆ ಹೇಳಿದ.

'ಬಹುಶಃ ಹೆಚ್ಚು ಛಳಿಯಿಂದಾಗಿ ಅದು ಕೂಗದೆ ಸುಮ್ಮನಿರಬಹುದು'– ಬೆರೀಲ್ ಉತ್ತರಿಸಿದ. 'ಛಳಿಯಿಂದಲಾ ? ಕೂಗುವುದರಿಂದ ಅವು ಬೆಚ್ಚಗಾಗುತ್ತವೆ. ನಮ್ಮ ಪಟ್ಟಣದಲ್ಲಿ ರೆಬಿಚಿ ಎಂಬ ಉಪಾಧ್ಯಾಯನಿದ್ದ. 'ರೂಸ್ಟರ್ ಕೂಗಿದಾಗ ಅದರ ರೆಕ್ಕೆಗಳು ಸುಡುತ್ತವೆ. ಅದನ್ನು ಆರಿಸಲೆಂದೇ ಅದು ಪಟ ಪಟ ರೆಕ್ಕೆ ಬಡಿಯುತ್ತಿರುತ್ತದೆ.' ಎಂದು ಆತ ಹೇಳುತ್ತಿದ್ದ.

'ಎಂಥ ಹುಚ್ಚು ಮಾತು !' ಲೈಬೆಲ್ ಉದ್ಗರಿಸಿದ.

'ಬಹುಶಃ ಹೀಗೆಂದು ಪವಿತ್ರ ಗ್ರಂಥದಲ್ಲಿ ಹೇಳಿರಬೇಕು'

'ಪವಿತ್ರ ಗ್ರಂಥಗಳು ಕ್ಷುಲ್ಲಕ ಸಂಗತಿಗಳನ್ನು ಹೇಳಲೂಬಹುದು ?

'ಬಹುಶಃ ಹೀಗೆಂದು ಗೆಮಾರಾ ಗ್ರಂಥದಲ್ಲಿರಬೇಕು'

'ರೂಸ್ಟರ್ ಪಕ್ಕಿಗಳ ರೆಕ್ಕೆಗೆ ಏನಾಗುತ್ತದೆಂದು ಅವರಿಗೆ ಹೇಗೆ ತಿಳಿಯುತ್ತದೆ ? ಅಧ್ಯಯನ ಕೊಠಡಿಯಲ್ಲಿಯೇ ಕುಳಿತು ಅವರು ಏನೆಲ್ಲ ಸಂಶೋಧಿಸುತ್ತಾರೆ'

ಅವರಿಗೂ ಕೆಲವು ಸಂಗತಿಗಳು ತಿಳಿದಿರುತ್ತದೆಯಪ್ಪ ! ಒಮ್ಮೆ ಧರ್ಮೋಪದೇಶಕನೊಬ್ಬ ನಮ್ಮ ಬಳಿ ಬಂದು ಹೇಳಿದ–ತತ್ವಜ್ಞಾನಿಗಳೆಲ್ಲರೂ ಹಾವು ಏಷ್ಟು ತಿಂಗಳು ಗರ್ಭ ಧರಿಸಿರುತ್ತದೆಯೆಂದು ತಿಳಿಯಬಯಸಿದರಂತೆ.

ಅವರು ಯಾರಿಗೂ ತಿಳಿಯಲಿಲ್ಲ. ಒಬ್ಬ ಹಾವಾಡಿಗನನ್ನು ಕೇಳಿದಾಗ 'ಏಳು ವರ್ಷಗಳು' ಎಂದು ಆತ ತಕ್ಷಣ ಹೇಳಿದನಂತೆ.

'ಏಳು ವರ್ಷಗಳಾ ?'

ಅವರೆಲ್ಲ ಸುಮ್ಮನಾದರು. ಚರ್ಚೆ ನಿಂತಿತು. ಬೆರೀಲ್ ತನ್ನ ಕಾಲು ಕೆರೆಯತೊಡಗಿದ. ಅವನಿಗೆ ಕಾಲಿನಲ್ಲಿ ಇಸುಬು ಆಗಿತ್ತು. ಅವನು ಕೆರೆಯುತ್ತ ಸಣ್ಣಗೆ ಶಬ್ದ ಮಾಡುತ್ತಿದ್ದ. ಆಗ ಇದ್ದಕ್ಕಿದ್ದಂತೆ ಆಳವಾದ ಗಡಸು ದನಿಯಲ್ಲಿ ಹೊಸಬ ಹೇಳಿದ : 'ಹಾವು ಏಳು ವರ್ಷಗಳಲ್ಲ, ಏಳು ತಿಂಗಳೂ ಗರ್ಭ ಧರಿಸುವುದಿಲ್ಲ.'

ವಾತಾವರಣ ಗಂಭೀರವಾಯಿತು. ಎಲ್ಲರಿಗೂ ಉತ್ಸಾಹ ತುಂಬಿತು.

'ಹಾವು ಎಷ್ಟು ದಿನ ಗರ್ಭ ಧರಿಸಿರುತ್ತದೆಂದು ನಿನಗೆ ಹೇಗೆ ಗೊತ್ತು ? ನೀನೇನು ಹಾವಿನ ಮರಿ ಹಾಕುತ್ತೀಯಾ ?' ಬೆರೀಲ್ ಕೇಳಿದ.

'ಯಾವುದೇ ಪ್ರಾಣಿ ಏಳು ವರ್ಷ ಗರ್ಭ ಧರಿಸುವುದಿಲ್ಲ. ಹಾವು ಎಷ್ಟು ವರ್ಷ ಬದುಕಿರುತ್ತದೆ ಗೊತ್ತಾ ?'

'ಅನೇಕ ರೀತಿಯ ಹಾವುಗಳಿರುತ್ತವೆಯಪ್ಪ !'

'ಗೆಮೆರಾ ರಚಿಸಿದವರಿಗೆ ಹೇಗೆ ತಿಳಿಯಬೇಕು ? ಹಾಗೆ ತಿಳಿಯಬೇಕಾದರೆ ಅವರು ಎರಡು ಹಾವುಗಳನ್ನು–ಒಂದು ಗಂಡು, ಒಂದು ಹೆಣ್ಣು–ಒಂದೆಡೆ ಬಿಟ್ಟು ಕೂಡುವಂತೆ ಮಾಡಬೇಕು'

'ಬಹುಶಃ ದೇವರು ಅವರಿಗೆ ಹೇಳಿರಬೇಕು'

'ಹೌದೌದು'

ಅವರೆಲ್ಲರೂ ಮತ್ತೆ ಸುಮ್ಮನಾದರು. ಅಪರಿಚಿತ ಈಗ ಎದ್ದು ಕುಳಿತ. ಆತನ ಚಹರೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲವಾದರೂ ಆತನ ಆಕೃತಿ ಸ್ಪಷ್ಟ ಕಾಣುತ್ತಿತ್ತು. ಕಣ್ಣುಗಳು ಹೊಳೆಯುತ್ತಿದ್ದುವು. ಸ್ವಲ್ಪ ಸಮಯದ ನಂತರ ಆತ ಹೇಳಿದ : 'ದೇವರು ಏನೂ ಹೇಳುವುದಿಲ್ಲ, ದೇವರು ಮೌನಿ.'

'ಅವನು ಮೋಸೆಸ್ ಜೊತೆ ಮಾತನಾಡಿದ್ದಾನೆ'

'ನಾನಾಗ ಅಲ್ಲಿರಲಿಲ್ಲ'

'ಹಾಗಾದರೆ ನೀನು ನಾಸ್ತಿಕನೋ, ಅಣ್ಣ ?'

'ಮೋಸೆಸ್ ಜೊತೆ ದೇವರು ಮಾತನಾಡಿದ, ಏನು ಹೇಳಿದ ಎಂದು

ನಿನಗೆ ಹೇಗೆ ಗೊತ್ತು ?' ಅಪರಿಚಿತ ವಾದಿಸಿದ. 'ಹಾಗೆಂದು ಪೆಂಟಾಟ್ಯುಚ್‌ನಲ್ಲಿ ಬರೆದಿದೆಯಲ್ಲವೇ ? ಆದರೆ ಪೆಂಟಾಟ್ಯುಚ್ ಬರೆದವರು ಯಾರು ? ಕೈಯ್ಯಲ್ಲಿ ಲೇಖನಿಯಿದ್ದರೆ ಏನು ಬೇಕಾದರೂ ಬರೆಯಬಹುದು ನಾನು ಕಾಲಿಶ್‌ನಿಂದ ಬಂದವನು. ಅಲ್ಲಿ ಇಬ್ಬರು ಧರ್ಮಶಾಸ್ತ್ರ ಪಂಡಿತರಿದ್ದರು. ಒಬ್ಬ ಒಂದು ವಸ್ತು ವನ್ನು ಪವಿತ್ರವೆಂದು ಹೇಳಿದರೆ ಮತ್ತೊಬ್ಬ ಅದನ್ನು ಅಪವಿತ್ರವೆಂದು ಹೇಳುತ್ತಿದ್ದ. ಒಮ್ಮೆ ಪಾಸೋವರ್ ಹಬ್ಬಕ್ಕೆ ಮುನ್ನ ವ್ಯಾಪಾರಿಯೊಬ್ಬ ಕೆಲವು ವಸ್ತುಗಳನ್ನು 'ಪವಿತ್ರ'ವೆಂದು ಹೇಳುವಂತೆ ಒಬ್ಬನನ್ನು ಒತ್ತಾಯಿಸಿದ. ಆತ ಒಪ್ಪಿ ಹಾಗೆಯೇ ಪ್ರಕಟಿಸಿದ. ಇನ್ನೊಬ್ಬ ಅದನ್ನು ತೀವ್ರವಾಗಿ ವಿರೋಧಿಸಿದ. ಏಕೆ ಗೊತ್ತಾ ? ಆತನಿಗೆ ಹತ್ತು ರೂಬೆಲ್‌ಗಳು ಸಿಕ್ಕಿರಲಿಲ್ಲ. ಇದೆಲ್ಲವನ್ನೂ ದೇವರು ಹೇಳಿರುತ್ತಾನಲ್ಲವೇ ?'

ಅವನ ಪ್ರಶ್ನೆಗೆ ಮಾಟೆಲ್ ಉತ್ತರಿಸುವುದರಲ್ಲಿದ್ದ. ಆದರೆ ಅಷ್ಟರಲ್ಲಿ ಅವನನ್ನು ತಡೆದು ಲೈಬೆಲ್ ಕೇಳಿದ : 'ನೀನು ಕಾಲಿಶ್‌ನವನಾದರೆ, ಇಲ್ಲಿಗೇಕೆ ಬಂದೆ ?'

'ಅದೊಂದು ಬೇರೆಯೇ ಕತೆ'

'ಅಂದರೆ ?'

ಅಪರಿಚಿತ ಉತ್ತರಿಸಲಿಲ್ಲ. ಮೌನ ಅಸಹನೀಯವಾಯಿತು.

'ನಿಮ್ಮ ಬಳಿ ಸಿಗರೇಟ್ ಇದೆಯಾ ?' ಅಪರಿಚಿತ ಕೇಳಿದ.

'ಇಲ್ಲ'

'ನನಗೆ ಊಟವಿಲ್ಲದಿದ್ದರೂ ನಡೆಯುತ್ತದೆ, ಆದರೆ ಸಿಗರೇಟು ಮಾತ್ರ ಅಗತ್ಯಬೇಕು. ಕಾವಲುಗಾರನಿಂದ ತರಿಸಿಕೊಡುತ್ತೀರಾ ?'

'ನಮ್ಮ ಬಳಿ ಹಣವಿಲ್ಲ'

'ನನ್ನ ಬಳಿ ಸ್ವಲ್ಪ ಇದೆ'

'ಜೈಲಿನಲ್ಲಿದ್ದರೂ ಹಣವಿದ್ದರೆ ಏನನ್ನು ಬೇಕಾದರೂ ಕೊಳ್ಳಬಹುದು. ಆದರೆ ಈಗ ಸಾಧ್ಯವಿಲ್ಲ, ಬೆಳಿಗ್ಗೆವರೆಗೆ ಕಾಯಬೇಕು'–ಲೈಬೆಲ್ ಉತ್ತರಿಸಿದ.

'ಛಳಿಗಾಲದ ರಾತ್ರಿಗಳು ಬಲು ಕಷ್ಟ' ಬೆರೀಲ್ ಹೇಳತೊಡಗಿದ. 'ಎಷ್ಟೇ ತಡವಾಗಿ ಮಲಗಿದರೂ ರಾತ್ರಿ ಹನ್ನೆರಡು ಗಂಟೆಗೆಲ್ಲಾ ಎಚ್ಚರವಾಗಿ ಬಿಡುತ್ತದೆ. ಕತ್ತಲೆಯಲ್ಲಿ ಕಣ್ಣು ತೆರೆದು ಮಲಗಿದರೆ ಏನೆಲ್ಲ ಆಲೋಚನೆಗಳು

ಮನಸ್ಸು ಮುತ್ತುತ್ತವೆ. ಆದ್ದರಿಂದಲೇ ಇಲ್ಲಿ ಮಾತು ತೀರಾ ಅಗತ್ಯ. ಮಾತನಾಡದಿದ್ದರೆ ಹುಚ್ಚೇ ಹಿಡಿಯುತ್ತದೆ.'

'ಮಾತನಾಡಲು ಏನಿರುತ್ತದೆ ?' ಅಪರಿಚಿತ ಕೇಳಿದ. 'ನಾವೊಂದು ಬಗೆದರೆ ದೈವವೊಂದು ಬಗೆಯಿತು ಎಂಬ ಗಾದೆಯಿದೆಯಲ್ಲ ಹಾಗೆ ನಾವಂದು ಕೊಳ್ಳುವುದೇ ಒಂದು, ಆಗುವುದೇ ಮತ್ತೊಂದು. ನಾನೇನು ನಾಸ್ತಿಕನಲ್ಲ, ದೇವರು ಏಳನೆಯ ಸ್ವರ್ಗದಲ್ಲಿ ಕುಳಿತು ಎಲ್ಲವನ್ನೂ ನಿಯಂತ್ರಿಸುತ್ತಾನೆಂದು ನಾನು ನಂಬುತ್ತೇನೆ'

'ನಿನ್ನನ್ನೇಕೆ ಜೈಲಿಗೆ ಹಾಕಿದರು ? ಲೈಬೆಲ್ ಕೇಳಿದ.

'ಭಜನೆ ಮಾಡಿದ್ದಕ್ಕೆ'

'ನಾನು ತಮಾಷೆ ಮಾಡುತ್ತಿಲ್ಲ, ಗಂಭೀರವಾಗಿ ಕೇಳುತ್ತಿದ್ದೇನೆ'

ಅಪರಿಚಿತ ಮೌನ ತಾಳಿದ.

'ಬೆಲೆಬಾಳುವ ವಸ್ತುವನ್ನೇ ಕದ್ದಿರಬೇಕು ಅಲ್ಲವಾ ? ಆ್ಞ ?'

'ಛೀ ! ನಾನು ಕಳ್ಳನಲ್ಲ. ನನ್ನಿಂದ ಯಾರೂ ಕದಿಯಲೂ ಬಿಡುವವನಲ್ಲ. ಯಾರಾದರೂ ಹಾಗೆ ಪ್ರಯತ್ನಿಸಿದರೆ ಅವರ ಮೂಳೆ ಮುರಿಯುತ್ತೇನೆ. ಆ ಕಾರಣದಿಂದಲೇ ಈಗ ನಾನಿಲ್ಲಿರುವುದು'

'ಇಲ್ಲಿಗಿಂತ ಮುಂಚೆ ನಿನ್ನನ್ನು ಯಾವ ಜೈಲಿನಲ್ಲಿಟ್ಟಿದ್ದರು ?'

'ಮೊದಲು ಕೆಲ್ಕ್‌ನಲ್ಲಿ, ನಂತರ ಲುಬ್ಲಿನ್‌ನಲ್ಲಿ'

'ನೀನು ಯಾರನ್ನಾದರೂ ಮುಗಿಸಿಬಿಟ್ಟೆಯಾ ?'

'ಹೌದು, ಅದೇ ನಾನು ಮಾಡಿದ್ದು.'

೨

ಅಪರಿಚಿತ ಮತ್ತೆ ಹೋಗಿ ಬೆಂಚಿನ ಮೇಲೆ ಮೈ ಚಾಚಿದ. ಬೆರೀಲ್ ತನ್ನ ಕಾಲು ಕೆರೆಯುತ್ತಾ ಕುಳಿತ. 'ನೀನು ಇಲ್ಲೇ ಇರುತ್ತೀಯಾ ?' ಮಾಟೆಲ್ ಕೇಳಿದ.

'ಅವರು ನನ್ನನ್ನು ಬಹುಶಃ ಸೈಬೀರಿಯಾಕ್ಕೆ ಕಳಿಸಬಹುದು'

ಲೈಬೆಲ್ ಕಿಟಕಿಯ ಬಳಿ ನಡೆದ. 'ಛೀ ! ಎಂಥ ಥಂಡಿ ಗಾಳಿ'

'ಇಂಥ ಹವೆಯಲ್ಲಿ ನಾಯಿಯನ್ನು ಹೊರಗೆ ಬಿಡುವುದೂ ಮಹಾಪಾಪ' ಮಾಟೆಲ್ ಹೇಳಿದ.

'ಹಾಗಾದರೆ ನಾನು ನಾಯಿಯಾಗಬಯಸುತ್ತೇನೆ' ಬೆರೀಲ್ ತಮಾಷೆ ಮಾಡಿದ.

'ಅಪರಿಚಿತ ಮತ್ತೆ ಮೇಲೆದ್ದ. ಗೋಡೆಗೆ ಒರಗಿ ಕೆನ್ನೆಯನ್ನು ಮಂಡಿಯ ಮೇಲಿಟ್ಟು ಕುಳಿತ. ಮುಕ್ಕಾದ ಚಂದ್ರನ ಬೆಳಕು ಅವನ ಹೊಳೆಯುವ ಕಣ್ಣು ಗಳಲ್ಲಿ ಪ್ರತಿಫಲಿಸುತ್ತಿತ್ತು. 'ಅವರು ನಿನ್ನನ್ನು ಬಿಡುಗಡೆ ಮಾಡಿದರೇನು, ಆರು ತಿಂಗಳಲ್ಲಿ ಮತ್ತೆ ನೀನು ಇಲ್ಲಿಯೇ ಇರುತ್ತೀ ?'

'ನನಗಂತೂ ಇದೇ ಕೊನೆಯ ಬಾರಿ' ತನಗೆ ತಾನೇ ಎಂಬಂತೆ, ಹಾಗೆಯೇ ಅಪರಿಚಿತನನ್ನು ಉದ್ದೇಶಿಸಿ ಲೈಬೆಲ್ ಹೇಳಿದ. 'ನನಗೆ ಈ ಅರೆಬೆಂದ ಬ್ರೆಡ್ ತಿಂದು ಸಾಕಾಗಿದೆ. ನನಗೆ ಹೆಂಡತಿ ಮಕ್ಕಳಿದ್ದಾರೆ.'

'ಎಲ್ಲರೂ ಹಾಡುವ ಪಲ್ಲವಿಯೆ ಇದು' ಅಪರಿಚಿತ ಹೇಳಿದ. 'ನೀವೆಲ್ಲ ಎಲ್ಲಿಂದ ಬಂದಿರಿ ? ಐಯಾಸ್ಥನಿಂದಲಾ ?

'ನೀನೊಬ್ಬ ಕಳ್ಳನಿರಲೇಬೇಕು'

'ಇಲ್ಲ, ನಾನು ಕಳ್ಳನಲ್ಲ. ಅಲ್ಲದೆ ಇದುವರೆಗೆ ನಾನು ಕೊಲೆಗಾರನೂ ಆಗಿರಲಿಲ್ಲ. ಸಾಯುವಂತಹ ಏಟುಗಳನ್ನು ಹೊಡೆಯುವ ಶಕ್ತಿ ನನಗಿತ್ತು. ಆದರೆ ಅನೇಕ ವರ್ಷಗಳವರೆಗೆ ಯಾರನ್ನೂ–ಒಂದು ಸೊಳ್ಳೆಯನ್ನೂ ಸಹ– ಹೊಡೆದಿರಲಿಲ್ಲ ?

'ಹಾಗಾದರೆ ಇದ್ದಕ್ಕಿದ್ದಂತೆ ಏನಾಯಿತು ?' ಲೈಬೆಲ್ ಕೇಳಿದ.

ಅಪರಿಚಿತ ತಡೆ ತಡೆದು ಹೇಳಿದ : 'ಅದು ವಿಧಿನಿಯಮ'

'ನೀನು ಯಾರನ್ನು ಕೊಂದೆ ? ವ್ಯಾಪಾರಿಯನ್ನ ?

'ಹೆಂಗಸೊಬ್ಬಳನ್ನು'

'ನಿನ್ನ ಹೆಂಡತಿಯನ್ನ ?'

'ಇಲ್ಲ, ಅವಳು ನನ್ನ ಹೆಂಡತಿಯಲ್ಲ'

'ಅವಳು ತಪ್ಪು ಮಾಡುತ್ತಿರುವಾಗಲೇ ನೀನವಳನ್ನು ಹಿಡಿದೆಯಾ ?'

ಅಪರಿಚಿತ ಏನೊಂದೂ ಉತ್ತರ ಕೊಡಲಿಲ್ಲ. ಅಲ್ಲಿ ಕುಳಿತು ತೂಕಡಿಸು

ತ್ತಿರುವವನಂತೆ ಕಾಣಿಸುತ್ತಿದ್ದ. ಇದ್ದಕ್ಕಿದ್ದಂತೆ ಆತ ಹೇಳಿದ–'ಅದೆಲ್ಲ ನಡೆದದ್ದು ಒಂದು ಹಕ್ಕಿಗಾಗಿ.'

'ಒಂದು ಹಕ್ಕಿಗಾಗಿ ? ತಮಾಷೆ ಮಾಡಬೇಡ'

'ನಾನು ಹೇಳುತ್ತಿರುವುದು ನಿಜ'

'ಎಂಥ ಹಕ್ಕಿ ಅದು ?'

'ಅದೊಂದು ಗಿಳಿ'

'ನೀನು ಅದೆಲ್ಲವನ್ನೂ ನಮಗೆ ಹೇಳು. ಯಾರಿಗೂ ಹೇಳದೆ ಮನಸಿನಲ್ಲೇ ಮುಚ್ಚಿಟ್ಟರೆ ನಿನಗೆ ಹುಚ್ಚು ಹಿಡಿದೀತು'

'ಹುಚ್ಚು ಹಿಡಿದರೇನು ಕೆಟ್ಟದ್ದಲ್ಲ. ಆದರೆ ನಮಗೆ ಬೇಕೆಂದಾಗ ಹುಚ್ಚು ಹಿಡಿಯುವುದಿಲ್ಲ ಅಷ್ಟೆ. ನಾನೊಬ್ಬ ಕುದುರೆ ವ್ಯಾಪಾರಿ ಅಥವಾ ಹೀಗೆ ಹೇಳುವಾ, ನಾನೊಬ್ಬ ಕುದುರೆ ವ್ಯಾಪಾರಿಯಾಗಿದ್ದೆ. ಕಾಲಿಶ್ಚ್‌ನಲ್ಲಿ ನನ್ನನ್ನು ಎಲ್ಲರೂ 'ಕುದುರೆ ವ್ಯಾಪಾರಿ ಸೈಮನ್' ಎಂದೇ ಗುರ್ತಿಸುತ್ತಿದ್ದರು. ನನ್ನ ತಂದೆ ಸಹ ಕುದುರೆ ವ್ಯಾಪಾರ ಮಾಡುತ್ತಿದ್ದ; ನನ್ನ ತಾತ ಸಹ. ಕಾಲಿಶ್ಚ್‌ನ ಕುದುರೆ ಕಳ್ಳರು ನನ್ನ ಬಳಿಗೆ ಕದ್ದ ಕುದುರೆಗಳನ್ನು ಮಾರಲು ಬಂದಾಗ ಅವರನ್ನು ಹಾಗೇ ಹಿಂತಿರುಗಿ ಕಳಿಸಿಬಿಡುತ್ತಿದ್ದೆ. ನನಗೆ ಕದ್ದ ಕುದುರೆಗಳು ಬೇಕಾಗಿರಲಿಲ್ಲ. ಕೆಲವೊಮ್ಮೆ ನಾನು ಅತ್ಯಂತ ದುರ್ಬಲವಾಗಿದ್ದ, ಶಕ್ತಿಹೀನ ವಾಗಿದ್ದ ಕುದುರೆಗಳನ್ನು ಕೊಳ್ಳುತ್ತಿದ್ದೆ. ಆದರೆ ಅವು ನನ್ನ ಬಳಿ ಬಂದ ಕೆಲ ಸಮಯದಲ್ಲಿಯೇ ನನ್ನ ಆರೈಕೆಯಿಂದ ಚೆನ್ನಾಗಿ ಬಿಡುತ್ತಿದ್ದವು. ನನಗೆ ಪ್ರಾಣಿ ಗಳೆಂದರೆ ತುಂಬಾ ಪ್ರೀತಿ. ಎಲ್ಲ ಪ್ರಾಣಿಗಳೂ ನನಗೆ ಇಷ್ಟ. ನಾವು ಕುದುರೆ ವ್ಯಾಪಾರದ ವಂಶದವರು. ನನ್ನ ಹೆಂಡತಿ ಮದುವೆಯಾದ ಎರಡು ವರ್ಷಗಳಲ್ಲೇ ತೀರಿಕೊಂಡಳು. ನಂತರ ಹದಿಮೂರು ವರ್ಷಗಳು ನಾನೊಬ್ಬನೇ ಇದ್ದೆ. ನಾನು ಅವಳನ್ನು ತುಂಬಾ ಪ್ರೀತಿಸುತ್ತಿದ್ದೆ. ನಾನವಳನ್ನು ಮರೆಯಲಾರೆ. ನಮಗೆ ಮಕ್ಕಳಿರಲಿಲ್ಲ. ನನಗೆ ಮನೆಯಿತ್ತು. ಕುದುರೆಲಾಯವಿತ್ತು. ಒಬ್ಬಳು ಕೆಲಸ ದವಳಿದ್ದಳು–ತರುಣಿಯಲ್ಲ, ವಯಸ್ಸಾದವಳು. ನೀವು ಬೇರೇನೂ ಆ ಬಗ್ಗೆ ಯೋಚಿಸುವ ಅಗತ್ಯವಿಲ್ಲ. ಎಲ್ಲರೂ ಹೇಳುವಂತೆ ನಾನು ಗೌರವಾನ್ವಿತನಾಗಿ ಜೀವಿಸುತ್ತಿದ್ದೆ. ಮದುವೆಯ ಮಧ್ಯಸ್ಥಗಾರರು ಅನೇಕ ಹೆಣ್ಣುಗಳನ್ನು ಸೂಚಿಸಿದ್ದರು. ಆದರೆ ನಾನು ಯಾರನ್ನೂ ಇಷ್ಟಪಡಲಿಲ್ಲ. ನಾನು ಎಂಥ

ಮನುಷ್ಯನೆಂದರೆ ನಾನು ಯಾವ ಹೆಣ್ಣನ್ನಾಗಲೀ ಪ್ರೀತಿಸದಿದ್ದರೆ, ಆಕೆಯೊಡನೆ ಬದುಕಲಾರೆ. ತೀರ ಸರಳ ಸಂಗತಿಯಾದರೂ ಇದು ನನ್ನ ಬದುಕಿನ ನಂಬಿಕೆ.

ಆಹ್ಹಾ !

ನನಗೆ ಪ್ರಾಣಿಗಳೆಂದರೆ ಇಷ್ಟ. ಕುದುರೆ ನನ್ನ ಪಾಲಿಗೆ ಕೇವಲ ಕುದುರೆ ಅಲ್ಲ. ನಾನು ಕುದುರೆಯನ್ನು ಮಾರಿದರೆ, ಅದನ್ನು ಎಂಥವರಿಗೆ ಮಾರುತ್ತಿದ್ದೇನೆಂದು ಮೊದಲೇ ತಿಳಿಯುತ್ತಿದ್ದೆ. ನಮ್ಮ ಪಟ್ಟಣದಲ್ಲಿ ಒಬ್ಬ ಗಾಡಿ ಹೊಡೆಯುವವನಿದ್ದ. ಆವನು ಕುದುರೆಗಳನ್ನು ಬಹುವಾಗಿ ಹೊಡೆಯುತ್ತಿದ್ದ. ಅವನಿಗೆಂದೂ ಕುದುರೆಗಳನ್ನು ಮಾರಲಿಲ್ಲ. ನಾನು ಸುಮಾರು ಹದಿನಾರು ವರ್ಷಗಳು ಕುದುರೆ ವ್ಯಾಪಾರ ಮಾಡಿದ್ದೇನೆ. ಎಂದೂ ಯಾವ ಕುದುರೆಗೂ ಒಮ್ಮೆಯೂ ಚಾವಟಿಯಿಂದ ಹೊಡೆದಿಲ್ಲ. ಪ್ರಾಣಿಗಳನ್ನು ಪ್ರೀತಿಯಿಂದ ನೋಡಿಕೊಂಡರೆ ಅವುಗಳಿಂದ ಏನನ್ನು ಬೇಕಾದರೂ ಪಡೆಯಬಹುದು. ಈ ಮಾತು ಯಾವ ಪ್ರಾಣಿಗಾದರೂ ಅನ್ವಯಿಸುತ್ತದೆ. ಅದು ಕುದುರೆಯಾಗಬಹುದು, ನಾಯಿಯಾಗಬಹುದು, ಅಥವಾ ಬೆಕ್ಕಾಗಬಹುದು. ನಾವು ಏನು ಹೇಳುತ್ತೇವೆಂಬುದನ್ನು ಪ್ರಾಣಿಗಳು ಅರ್ಥಮಾಡಿಕೊಳ್ಳುತ್ತವೆ. ಅಷ್ಟೇ ಅಲ್ಲ, ನಮ್ಮ ಮನಸ್ಸಿನ ಆಲೋಚನೆಗಳನ್ನೂ ಅವು ಊಹಿಸಬಲ್ಲುವು. ಕತ್ತಲೆಯಲ್ಲೂ ಅವು ನೋಡಬಲ್ಲುವು. ಮನುಷ್ಯನಿಗಿಂತ ಪ್ರಾಣಿಗಳಿಗೆ ನೆನಪಿನ ಶಕ್ತಿ ಹೆಚ್ಚು. ಅನೇಕ ವೇಳೆ ನಾನು ದಾರಿತಪ್ಪಿದ್ದುಂಟು. ಆದರೆ ನನ್ನ ಕುದುರೆಗಳು ನನ್ನನ್ನು ಸರಿಯಾದ ಸ್ಥಳಕ್ಕೆ ತಲುಪಿಸಿವೆ. ಮಂಡಿಯುದ್ದದ ಮಂಜುಬಿದ್ದಾಗಲೂ ನನ್ನ ಕುದುರೆಗಳು ನನ್ನನ್ನು ಒಕ್ಕಲು ಗುಡಿಸಲಿನವರೆಗೆ ಕರೆದೊಯ್ದು ಬಿಟ್ಟಿವೆ. ಕೆಲವೊಮ್ಮೆ ಅವು ನಿಂತು ತಲೆಯಾಡಿಸುತ್ತಿದ್ದುವು 'ಒಡೆಯಾ, ಇದು ಇಲ್ಲಿದೆ' ಎಂದು ಹೇಳುವಂತೆ.

ನಾವು ಒಬ್ಬರೇ ಇದ್ದಾಗ ಮಾತ್ರ, ಈ ಪ್ರಾಣಿಗಳನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಲು ಸಾಧ್ಯವಾಗುತ್ತದೆ. ಕುದುರೆಗಳ ಜೊತೆಗೆ ನನ್ನ ಬಳಿ ನಾಯಿಗಳು, ಬೆಕ್ಕುಗಳು, ಮೊಲಗಳು, ಹಸುಗಳು ಹಾಗೂ ಮೇಕೆಗಳೂ ಇದ್ದುವು. ನಾನು ನಗರದ ಹೊರವಲಯದಲ್ಲಿ ವಾಸಿಸುತ್ತಿದ್ದೆ. ಏಕೆಂದರೆ ನಗರದೊಳಗೆ ಇವುಗಳನ್ನೆಲ್ಲ ಸಾಕಲು ವಿಶಾಲವಾದ ಜಾಗ, ಕುದುರೆಗಳಿಗಾಗಿ ಹುಲ್ಲುಗಾವಲು ಎಲ್ಲಿ ಸಿಗುತ್ತದೆ ? ಛಳಿಗಾಲದಲ್ಲಾದರೆ ಒಣಹುಲ್ಲಾದರೂ ಪರವಾಗಿಲ್ಲ, ಆದರೆ

ಬೇಸಿಗೆಯಲ್ಲಿ ಕುದುರೆಗಳು ಹಸುರುಹುಲ್ಲು ಬಯಸುತ್ತವೆ. ರೈತರು ತಮ್ಮ ಕುದುರೆಗಳನ್ನು ರಾತ್ರಿಯಿಡೀ ಹುಲ್ಲುಗಾವಲಿನಲ್ಲಿ ಕಟ್ಟಿಹಾಕಿರುತ್ತಾರೆ. ಆದರೆ ಕಟ್ಟಿಹಾಕಿದ ಕುದುರೆಗಳು ಕಟ್ಟಿಹಾಕಿದ ಮನುಷ್ಯನಂತೆ. ಸೆರೆಯಲ್ಲಿರುವುದೇನು ಚೆನ್ನವೇ? ನಾನು ನನ್ನ ಹುಲ್ಲುಗಾವಲಿನ ಸುತ್ತ ದೊಡ್ಡ ಬೇಲಿಯನ್ನು ಹಾಕಿಸಿದ್ದೆ. ಅದನ್ನು ನೋಡಿ ಜನ ನಕ್ಕರು. ಆರು ಎಕರೆಯ ಪ್ರದೇಶಕ್ಕೆ ಬೇಲಿ ಹಾಕಿಸುವುದು ಬಲು ದುಬಾರಿ, ವ್ಯರ್ಥ ಎಂದು ಅವರು ನನಗೆ ಹೇಳಿದರು. ಆದರೆ ನಾನು ಅವರ ಮಾತುಗಳನ್ನು ಲೆಕ್ಕಿಸಲಿಲ್ಲ. ನನ್ನ ಕುದುರೆಗಳನ್ನು ಕಟ್ಟಿ ಹಾಕುವುದು ನನಗಿಷ್ಟವಿರಲಿಲ್ಲ. ಹಾಗೆಂದು ಅವುಗಳನ್ನು ಬಿಟ್ಟು ಅವು ಬೇರೆಯವರ ಹುಲ್ಲುಗಾವಲಿಗೆ ಹೋಗಿ ಹೊಡೆತ ತಿನ್ನುವುದೂ ನನಗಿಷ್ಟವಿರಲಿಲ್ಲ. ಕೊಲೆಗಾರನಾಗುವತನಕ–ಹೀಗೆ ನಾಸಿದ್ದದ್ದು.

'ಹಕ್ಕಿಯೆಂದೆಯಲ್ಲ ಏನದು ?'

ಸ್ವಲ್ಪ ತಾಳು. ಅಲ್ಲಿಗೇ ಬರುತ್ತಿದ್ದೇನೆ. ನಾನು ಕೋಳಿಗಳನ್ನು ಸಾಕಿದ್ದೆ: ಕೆಲವು ಹಕ್ಕಿಗಳೂ ಇದ್ದುವು. ಮೊದಮೊದಲು ಹಕ್ಕಿಗಳು ಮನೆಯೊಳಗಿರುತ್ತಿರಲಿಲ್ಲ. ಮನೆಯ ಚಾವಣಿಯ ಮೇಲಿರುತ್ತಿದ್ದುವು. ಸ್ಟಾರ್ಕ್ ಹಕ್ಕಿಗಳು ಪಾಸೋವರ್ ಹಬ್ಬದ ನಂತರ ಬಿಸಿಲು ಪ್ರದೇಶದ ದೇಶಗಳಿಂದ ಬಂದು ನನ್ನ ಮನೆಯ ಚಾವಣಿಯ ತುದಿಯಲ್ಲಿ ಗೂಡುಕಟ್ಟುತ್ತಿದ್ದುವು. ಹೊಸದಾಗಿ ಕಟ್ಟುವ ಅಗತ್ಯವಿರಲಿಲ್ಲ, ಮಳೆಗೆ ಹಿಮಕ್ಕೆ ಸಿಕ್ಕಿ ಶಿಥಿಲವಾಗಿದ್ದ ಹಳೆಯ ಗೂಡುಗಳನ್ನೇ ಅವು ಸರಿಪಡಿಸಿಕೊಳ್ಳುತ್ತಿದ್ದುವು. ಕಾಗೆಗಳು ದುರದೃಷ್ಟವನ್ನು ತರುತ್ತವೆಂದು ಜನರು ನಂಬುತ್ತಾರೆ. ಆದರೆ ಅವು ಅತ್ಯಂತ ಬುದ್ಧಿವಂತ ಹಕ್ಕಿಗಳು. ನನ್ನಲ್ಲಿ ಪಾರಿವಾಳದ ಗೂಡುಗಳೂ ಇದ್ದುವು. ಕೆಲವರು ಪಾರಿವಾಳದ ಎಳೆಯ ಮರಿಗಳನ್ನು ತಿನ್ನುತ್ತಾರೆ. ಆದರೆ ನಾನೆಂದೂ ಅವುಗಳ ರುಚಿ ನೋಡಿಲ್ಲ. ಗರಿ ಮೂಡದ ಪಾರಿವಾಳದ ಮರಿಗಳಲ್ಲಿ ಎಷ್ಟು ಮಾಂಸವಿದ್ದೀತು ಹೇಳು ?

ನೀನು ಒಳ್ಳೆಯ ಸಂತನಂತೆ ತೋರುತ್ತೀ !

ಉಹ್ಞು ! ನಾನು ಸಂತನಲ್ಲ. ಆದರೆ ನಗರದ ಹೊರವಲಯದಲ್ಲಿ ಬದುಕಿದ ಯಾರಿಗಾದರೂ ಎಲ್ಲ ರೀತಿಯ ಸಂಗತಿಗಳೂ ಕಾಣಿಸುತ್ತವೆ. ಹಕ್ಕಿಯೊಂದು ಮುರಿದ ರೆಕ್ಕೆಯೊಂದಿಗೆ ಹಾರಲು ಯತ್ನಿಸುತ್ತದೆ, ಕಾಲು ಮುರಿದ ನಾಯಿ ಕುಂಟುತ್ತಾ ಬರುತ್ತದೆ. ನಾನೇನೂ ಕ್ರೂರ ವ್ಯಕ್ತಿಯಲ್ಲ; ಅನಿರೆ

ಹಕ್ಕಿಯೊಂದು ನೆಲದಲ್ಲಿ ಬಿದ್ದು ತತ್ತರಿಸುತ್ತ ಮೇಲೇಳದಿದ್ದಾಗ ಸಹಾಯ ಮಾಡ ಬೇಕೆನ್ನಿಸುತ್ತದೆ. ನಾನೊಮ್ಮೆ ಅಂಥ ಹಕ್ಕಿಯೊಂದನ್ನು ಮನೆಗೆ ತೆಗೆದುಕೊಂಡು ಹೋಗಿ, ಅದರ ರೆಕ್ಕೆಗಳು ಮೊದಲಿನಂತಾಗುವವರೆಗೆ ಶುಶ್ರೂಷೆ ಮಾಡಿದ್ದೆ. ವೈದ್ಯನಂತೆ ಅದಕ್ಕೆ ಬ್ಯಾಂಡೇಜ್ ಹಾಕಿದ್ದೆ. ಜ್ಯೂಗಳು ನನ್ನನ್ನು ನೋಡಿ ನಕ್ಕರು. ಆದರೆ ಜ್ಯೂಗಳಿಗೆ ಪ್ರಾಣಿಗಳ ಬಗ್ಗೆ ಏನು ಗೊತ್ತು ಹೇಳಿ ? ಕೆಲವು ಸುಸಂಸ್ಕೃತರು ಮಾತ್ರ ನನ್ನನ್ನು ಅರ್ಥಮಾಡಿಕೊಂಡಿದ್ದರು. ಬೇಸಿಗೆಯ ದಿನ ಗಳಲ್ಲಿ ನನ್ನ ಮನೆಯ ಕಿಟಕಿ ಬಾಗಿಲುಗಳು ಸದಾ ತೆರೆದಿರುತ್ತಿದ್ದವು. ತಮಗೆ ಇಷ್ಟ ಬಂದಾಗ ಹಕ್ಕಿಗಳು ಬರಬಹುದಿತ್ತು, ಮೊಟ್ಟೆಯಿಡಬಹುದಿತ್ತು, ಇಷ್ಟ ವಿರುವವರೆಗೂ ಇರಬಹುದಿತ್ತು, ನಂತರ ಹಾರಿಹೋಗಬಹುದಾಗಿತ್ತು. ಒಮ್ಮೆ ಒಂದು ಹಕ್ಕಿ ಹಿಂತಿರುಗಿ ಬಂದಿತು. ಒಂದೇ ಅಲ್ಲ, ಹೆಂಡತಿಯೊಂದಿಗೆ. ನಾನು ಸ್ಟೂಲಿನ ಮೇಲೆ ಕುಳಿತು ಕುದುರೆಯ ಜೀನನ್ನು ಸರಿಪಡಿಸುತ್ತಿದ್ದೆ. ಒಮ್ಮೆಗೇ ಎರಡು ಹಕ್ಕಿಗಳೂ ಒಳಗೆ ಹಾರಿಬಂದುವು. ಗಂಡು ಹಕ್ಕಿಯನ್ನು ನಾನು ಸುಲಭ ವಾಗಿ ಗುರ್ತಿಸಿದೆ. ಅದರ ಕಾಲಿನ ಮೇಲೆ ಒಂದು ಮಚ್ಚೆಯಿತ್ತು. ಅವು ಬಂದು ಶೆಲ್ಫಿನ ಮೇಲೆ ಕುಳಿತು 'ಗುಡ್ ಮಾರ್ನಿಂಗ್' ಹೇಳಿದುವು. ಅದೆಲ್ಲ ಒಂದು ಕನಸಿನ ರೀತಿಯಿತ್ತು.

ಮದುವೆ ಮಾಡಿಸುವ ಮಧ್ಯಸ್ಥಗಾರರು ಬಂದು ಅನೇಕ ಹೆಣ್ಣುಗಳನ್ನು ನನಗೆ ಸೂಚಿಸುತ್ತಿದ್ದರು. ಆದರೆ ಯಾರೂ ನನಗೆ ಹಿಡಿಸಲಿಲ್ಲ. ಒಬ್ಬಳು ಕುರೂಪಿ ಯಾದರೆ, ಮತ್ತೊಬ್ಬಳು ತುಂಬಾ ದಪ್ಪಗಿದ್ದಳು, ಇನ್ನೊಬ್ಬಳು ತುಂಬಾ ವಾಚಾಳಿಯಾಗಿದ್ದಳು. ಹೀಗೇ....ವಾಚಾಳಿಗಳೆಂದರೆ ನನಗೆ ಆಗದು. ಪ್ರಾಣಿಗಳು ಸಾಮಾನ್ಯವಾಗಿ ಹೆಚ್ಚು ಮೌನವಾಗಿರುತ್ತವೆ. ಆದ್ದರಿಂದಲೇ ಅವುಗಳ ಬಗ್ಗೆ ನನಗೆ ವಿಶೇಷ ಪ್ರೀತಿ.

ಗಿಳಿ ಮಾತಾಡುತ್ತದಲ್ಲ !

ಹೌದು.

ಮುಂದೆ ?

ವಿಶೇಷವೇನಿಲ್ಲ. ಹಾಗೆಯೇ ವರುಷಗಳು ಉರುಳುತ್ತಿದ್ದುವು. ನನ್ನ ಹೆಂಡತಿಯ ಮೊದಲ ವರ್ಷಾಬ್ದಿಕ, ನಂತರ ಎರಡನೆಯದು, ಆಮೇಲೆ ಎಂಟನೆಯದು...ಬೇರೆ ಕುದುರೆ ವ್ಯಾಪಾರಗಾರರು ಶ್ರೀಮಂತರಾಗುತ್ತಿದ್ದರು.

ಆದರೆ ನಾನು ಮಾತ್ರ ಅಗತ್ಯಕ್ಕೆಷ್ಟೋ ಅಷ್ಟೇ ಸಂಪಾದಿಸುತ್ತಿದ್ದೆ. ನಾನೆಂದೂ ಗಿರಾಕಿಗಳನ್ನು ಮೋಸ ಮಾಡುತ್ತಿರಲಿಲ್ಲ. ಎಷ್ಟು ಲಾಭ ಪಡೆಯಬೇಕೆಂದು ನನಗೆ ಗೊತ್ತಿತ್ತು, ಅಷ್ಟನ್ನು ಮಾತ್ರ ಪಡೆಯುತ್ತಿದ್ದೆ. ಒಬ್ಬನೇ ಇರುವುದು ನನಗೆ ಅಭ್ಯಾಸವಾಗಿಬಿಟ್ಟಿತ್ತು.

ನಿನಗೆ ಹೆಣ್ಣು ಬೇಕೆನ್ನಿಸಿದಾಗ ಏನು ಮಾಡುತ್ತಿದ್ದೆ ?

ನೀನೇನು ಮಾಡುತ್ತೀ ?

ಜೈಲಿನಲ್ಲಿ ಏನು ಮಾಡಲು ಸಾಧ್ಯ ?

ನಾವು ಯಾರನ್ನೂ ಇಷ್ಟಪಡಲು ಸಾಧ್ಯವಾಗದಿದ್ದಾಗ, ಅದೂ ಒಂದು ರೀತಿ ಜೈಲಿನಲ್ಲಿದ್ದಂತೆಯೇ. ಕಾಲಿಶ್ಚನಲ್ಲಿ ಸಾಕಷ್ಟು ವೇಶ್ಯೆಯರಿದ್ದರು. ಆದರೆ ಅವರನ್ನು ನೋಡಿದರೆ ನನಗೆ ವಾಂತಿ ಮಾಡಿಕೊಳ್ಳುವಂತಾಗುತ್ತಿತ್ತು. ಒಕ್ಕಲು ಹೆಂಗಸು ಅಥವಾ ಹುಡುಗಿ ಸಿಗುತ್ತಿದ್ದರು. ಆದರೆ ಅವರು ತುಂಬಾ ಕೊಳಕಾಗಿರುತ್ತಿದ್ದರು. ನನ್ನ ಹೆಂಡತಿ ಅತ್ಯಂತ ಶುಚಿಯಾಗಿರುತ್ತಿದ್ದಳು. ಪ್ರತಿರಾತ್ರಿ ತಲೆ ಬಾಚಿಕೊಳ್ಳುತ್ತಿದ್ದಳು. ಬೇಸಿಗೆಯಲ್ಲಿ ನಾವು ಕೊಳದಲ್ಲಿ ಸ್ನಾನ ಮಾಡುತ್ತಿದ್ದೆವು. ಎದೆಯಲ್ಲಿನ ಗಡ್ಡೆಯಿಂದಾಗಿ ಅವಳು ಸತ್ತಳು. ಡಾಕ್ಟರರು ಒಮ್ಮೆ ಅದನ್ನು ತೆಗೆದಿದ್ದರು. ಆದರೆ ಅದು ಮತ್ತೆ ಬೆಳೆಯಿತು. ಅಂತಹ ನೋವು ನನ್ನ ಶತ್ರುಗಳಿಗೂ ಬೇಡ.

'ಅವಳು ಚೆಲುವೆಯಾ ?'

'ಅವಳೊಬ್ಬಳು ರಾಜಕುಮಾರಿ'

೩

'ಅದು ಸರಿ, ಗಿಳಿಯ ಸಂಗತಿ ಏನು ?'

'ಸ್ವಲ್ಪ ತಾಳು. ಎಲ್ಲಿಂದ ಆರಂಭಿಸಲಿ ? ನಾನು ಅಜ್ಜಿಯಲ್ಲ, ಅಜ್ಜಿ ಕತೆಗಳನ್ನು ನಾನು ಹೇಳುವುದೂ ಇಲ್ಲ. ಅಲೆಮಾರಿಗಳು ಕುದುರೆಗಳನ್ನು ಮಾರಲು ನನ್ನ ಬಳಿ ಬರುತ್ತಿದ್ದರು. ಆದರೆ ಅವುಗಳನ್ನು ನಾನು ಕೊಳ್ಳುತ್ತಿರಲಿಲ್ಲ. ಬಹಳಷ್ಟು ಸಾರಿ ಅವರು ಕದ್ದು ತರುತ್ತಿದ್ದರು. ಕಳವಿನ ಮಾಲು ನನಗೆ ಬೇಕಿರಲಿಲ್ಲ. ಅಲ್ಲದೆ ಅವರು ತರುತ್ತಿದ್ದ ಕುದುರೆಗಳು ನೋಡಲು ಚೆನ್ನಾಗಿರು

ತ್ತಿದ್ದುವು. ಪರಿಣತನಾಗಿರದಿದ್ದರೆ ಅವುಗಳ ದೋಷ ತಿಳಿಯುತ್ತಿರಲಿಲ್ಲ. ಆದರೆ ಕ್ರಮೇಣ ಅವು ಎಂಥವೆಂಬುದು ಗೊತ್ತಾಗುತ್ತಿತ್ತು. ನನಗೆ ಕುದುರೆಗಳನ್ನು ನೋಡಿದ ತಕ್ಷಣ ಅವುಗಳ ಬಗ್ಗೆ ತಿಳಿಯುತ್ತಿತ್ತು. ಅದರಿಂದಾಗಿ ಅವರೂ ನನ್ನ ಬಳಿ ಹೆಚ್ಚು ಬರುತ್ತಿರಲಿಲ್ಲ.

ಒಂದು ದಿನ ನಾನು ಬೆಳಿಗ್ಗೆ ಉಪಾಹಾರ ಸೇವಿಸುತ್ತ ಕುಳಿತಿದ್ದೆ. ನನ್ನ ಉಪಾಹಾರವೆಂದರೆ ಸ್ವಲ್ಪ ಕಾಳು ಹಾಗೂ ಕೊಂಚ ಹಾಲು. ಪ್ರತಿನಿತ್ಯ ನಾನು ಇದನ್ನೇ ಸೇವಿಸುತ್ತಿದ್ದೆ. ನನ್ನ ಬಳಿ ಸದಾ ಕಾಳು ತುಂಬಿದ ಚೀಲಗಳಿರುತ್ತಿದ್ದವು. ನನಗೆ ಹಾಗೂ ಹಕ್ಕಿಗಳಿಗೆ. ಹಾಗೆ ಕುಳಿತಿದ್ದಾಗ ಒಬ್ಬಳು ಅಲೆಮಾರಿ ಹೆಂಗಸು ಬಂದಳು. ದಪ್ಪನೆಯ ಕಪ್ಪು ಹೆಂಗಸು. ದೊಡ್ಡ ಕಿವಿಯುಂಗುರ ಹಾಕಿದ್ದಳು. ಕತ್ತಿನ ಸುತ್ತ ಅನೇಕ ಮಣಿಸರಗಳಿದ್ದುವು. ಒಳಬಂದವಳೇ 'ಸ್ವಾಮಿ, ನಿಮ್ಮ ಕೈ ತೋರಿಸಿ' ಎಂದಳು, ನಾನೆಂದೂ ಜ್ಯೋತಿಷಿಯ ಬಳಿ ಹೋದವನಲ್ಲ, ಅವರಲ್ಲಿ ನನಗೆ ನಂಬಿಕೆಯು ಇಲ್ಲ. ಮುಂದೆ ನಡೆಯುವ ಸಂಗತಿಗಳನ್ನು ಮೊದಲೇ ತಿಳಿಯುವುದರಿಂದ ಏನು ಉಪಯೋಗ ? ಏನು ನಡೆಯಬೇಕು ಅದು ನಡೆದೇ ನಡೆಯುತ್ತದೆ. ಆದರೆ ಸುಮ್ಮನೆ ನನ್ನ ಕೈ ನೀಡಿದೆ. ಅವಳು ನನ್ನ ಬಲಗೈ ನೋಡಿ ಮುಗುಳ್ನಕ್ಕಳು. ನಂತರ ಅವಳು ನನ್ನ ಎಡಗೈ ತೋರಿಸಲು ಹೇಳಿದಳು 'ಎಡಗೈ ಏಕೆ ನೋಡುತ್ತೀ ?' ನಾನು ಕೇಳಿದೆ. 'ಬಲಗೈ ನಿಮ್ಮ ಅದೃಷ್ಟವನ್ನು ಹೇಳಿದರೆ, ಎಡಗೈ ನಿಮ್ಮ ಹೆಂಡತಿಯ ಅದೃಷ್ಟವನ್ನು ಹೇಳುತ್ತದೆ' ಎಂದಳು. 'ಆದರೆ ನನಗೆ ಹೆಂಡತಿಯಿಲ್ಲವಲ್ಲ, ಸತ್ತುಹೋಗಿದ್ದಾಳೆ' ಎಂದೆ. ಆಗ ಅವಳು 'ಇನ್ನೊಬ್ಬಳು ಬರಬಹುದು' ಎಂದಳು. ನಾನು 'ಯಾವಾಗ ?' ಎಂದು ಕೇಳಿದೆ. 'ಅವಳು ಹಕ್ಕಿಯಂತೆ ಕಿಟಕಿಯ ಮೂಲಕ ಹಾರಿಬರುವಳು' ಎಂದಳು. 'ಅವಳಿಗೇನು ರೆಕ್ಕೆಗಳಿವೆಯೋ ?' ನಾನು ಕೇಳಿದೆ. ಅವಳು ನಕ್ಕಳು. ಬೆಳ್ಳಗಿನ ಹಲ್ಲು ಹೊಳೆಯಿತು. ಅವಳಿಗೆ ನಾನು ಸ್ವಲ್ಪ ಹಣ ಹಾಗೂ ಕೊಂಚ ಬ್ರೆಡ್ ಕೊಟ್ಟೆ, ಅವಳು ಹೊರಟು ಹೋದಳು. ಅವಳ ಮಾತುಗಳಿಗೆ ನಾನು ಹೆಚ್ಚಿನ ಗಮನವನ್ನೇನೂ ನೀಡಲಿಲ್ಲ. ಅಲೆಮಾರಿಗಳ ಅಸಂಬದ್ಧ ಮಾತುಗಳಿಗೆ ಯಾರು ಪ್ರಾಮುಖ್ಯತೆ ನೀಡುತ್ತಾರೆ ? ಆದರೆ ಅವಳ ಮಾತುಗಳು ಅದು ಹೇಗೋ ನನ್ನ ತಲೆಯೊಳಗೆ ನುಸುಳಿ, ಆಗಾಗ ನೆನಪಾಗುತ್ತಿದ್ದವು. ಕೆಲವೊಮ್ಮೆ ಯಾವುದಾದ

ರೊಂದು ಆಲೋಚನೆ ತಲೆಗೆ ಬಂತೆಂದರೆ ಅದರಿಂದ ತಪ್ಪಿಸಿಕೊಳ್ಳುವುದು ಎಷ್ಟೊಂದು ಕಷ್ಟ ಅಲ್ಲವೇ ?

ಈಗ ಮುಂದೆ ಏನಾಯಿತೆಂಬುದನ್ನು ಕೇಳಿ. ಹಳ್ಳಿಯೊಂದರಿಂದ ಕುದುರೆಗಳನ್ನು ಕೊಳ್ಳಲು ಹೇಳಿ ಕಳಿಸಿದರು. ರಾತ್ರಿ ಅಲ್ಲಿಯೇ ಉಳಿಯಬೇಕಾಯಿತು. ಮೂರನೆಯ ದಿನ ನಾಲ್ಕು ಕುದುರೆಗಳೊಂದಿಗೆ ನಾನು ಮನೆಗೆ ಬಂದೆ. ಅವುಗಳಲ್ಲೊಂದು ನನ್ನದೇ ಹೆಣ್ಣುಕುದುರೆ. ಉಳಿದ ಮೂರನ್ನು ನಾನು ಕೊಂಡುಕೊಂಡಿದ್ದೆ. ನಾನು ಮನೆಯೊಳಗೆ ಬರುತ್ತಿದ್ದಂತೆಯೇ ಒಳಗೆ ಗಿಳಿಯೊಂದು ಕುಳಿತಿರುವುದನ್ನು ಕಂಡೆ. ನಾನು ನನ್ನ ಕಣ್ಣುಗಳನ್ನು ನಂಬದಾದೆ. ಸ್ಥಳೀಯವಾದ ಅನೇಕ ರೀತಿಯ ಹಕ್ಕಿಗಳು ಬಂದು ಹೋಗುತ್ತಿದ್ದುದೇನೋ ಸರಿ, ಆದರೆ ಈ ಗಿಳಿ ಎಲ್ಲಿಂದ ಬಂತು ? ಗಿಳಿಗಳು ಈ ದೇಶದವಲ್ಲ. ವಾರ್ಡ್‌ರೋಬಿನ ಮೇಲೆ ಕುಳಿತ ಅದು ನನ್ನನ್ನೇ ನಿರೀಕ್ಷಿಸುತ್ತಿದ್ದಂತೆ ನನ್ನತ್ತ ನೋಡಿತು. ಎಳೆಯ ನಿಂಬೆಯ ಹಚ್ಚ ಹಸುರು ಬಣ್ಣ. ಮೇಲೆ ಕಪ್ಪುಚುಕ್ಕೆಗಳಿದ್ದುವು. ಕತ್ತಿನ ಬಳಿ ಹಳದಿ ಬಣ್ಣವಿತ್ತು. ಅದೇನೂ ಅಂಥ ದೊಡ್ಡಗಿಳಿಯಾಗಿರಲಿಲ್ಲ: ತೀರಾ ಚಿಕ್ಕದೆಂದೇ ಹೇಳಬಹುದು. ನಾನು ಅದಕ್ಕೆ ಸ್ವಲ್ಪ ಕಾಳು ನೀಡಿದೆ. ತಿಂದಿತು. ತಟ್ಟೆಯೊಂದರಲ್ಲಿ ನೀರು ಹಾಕಿದೆ. ಕುಡಿಯಿತು. ಕೈ ಬೆರಳು ನೀಡಿದೆ. ಬಹಳ ಹಳೆಯ ಗೆಳೆಯನಂತೆ ಹಾರಿ ಬಂದು ಕುಳಿತಿತು. ಆ ಕ್ಷಣ ನಾನು ನನ್ನ ಉಳಿದೆಲ್ಲ ವ್ಯವಹಾರಗಳನ್ನೂ ಮರೆತೆ. ಸ್ವಂತ ಮಗುವೆಂಬಂತೆ ನನಗೆ ಅದರ ಬಗ್ಗೆ ಮಮತೆ ಮೂಡಿತು. ಮೊದಮೊದಲು ಎಲ್ಲಿ ಹಾರಿಹೋಗಿಬಿಡುತ್ತದೋ ಎಂಬ ಆತಂಕದಿಂದ ಕಿಟಕಿ ಮುಚ್ಚಬೇಕೆಂದುಕೊಂಡಿದ್ದೆ. ಆದರೆ ಅದು ಬೇಸಿಗೆಯ ದಿನಗಳು. ಆದ್ದರಿಂದ ಕಿಟಕಿ ಮುಚ್ಚಲಿಲ್ಲ. ಅಲ್ಲದೆ ಅದು ನಿಜಕ್ಕೂ ಇರಬೇಕೆಂದರೆ ಇರುತ್ತದೆ, ಇಲ್ಲದಿದ್ದರೆ ಹಾರಿಹೋಗುತ್ತದೆ ಎಂದು ಸುಮ್ಮನಾದೆ. ಆದರೆ ಅದು ಹಾರಿಹೋಗಲಿಲ್ಲ. ನಾನೊಂದು ಗೂಡು ತಂದೆ. ಕಾಳಿಗಾಗಿ ಒಂದು ತಟ್ಟೆ, ನೀರಿಗಾಗಿ ಒಂದು ಬಟ್ಟಲು, ತರಕಾರಿಗಳು, ಒಂದು ಸಣ್ಣ ಕನ್ನಡಿ ಹಾಗೂ ಅದಕ್ಕೆ ಅಗತ್ಯವಾದ ಎಲ್ಲ ವಸ್ತುಗಳನ್ನು ಅದರಲ್ಲಿಟ್ಟೆ. ನಾನದನ್ನು 'ಮಟೋಜ' ಎಂದು ಕರೆದೆ. ಅದೇ ಹೆಸರು ಖಾಯಂ ಆಯಿತು. ಆರಂಭದಲ್ಲಿ ಅದು ಮಾತನಾಡುತ್ತಿರಲಿಲ್ಲ. ಸುಮ್ಮನೆ ಕೂಗುತ್ತಿತ್ತು. ನಂತರ ಅದು ವಿಚಿತ್ರವಾದ ಅಪರಿಚಿತ ಭಾಷೆಯಲ್ಲಿ ಮಾತನಾಡತೊಡಗಿತು. ಬಹುಶಃ ಅದು ಅಲೆಮಾರಿಗಳ ಭಾಷೆ

ಯಾಗಿದ್ದಿರಬೇಕು. ಏಕೆಂದರೆ ಅದು ರಷ್ಯನ್, ಪೋಲಿಷ್ ಅಥವಾ ಯಿಡ್ಡಿಷ್ ಯಾವುದೂ ಆಗಿರಲಿಲ್ಲ. ಅದು ಅಲೆಮಾರಿಗಳಿಂದ ತಪ್ಪಿಸಿಕೊಂಡು ಬಂದದ್ದಿರಬೇಕು.

ಗಿಳಿ ಬಂದಾಗಲೇ ಆ ಅಲೆಮಾರಿ ಹೆಂಗಸು ಹೇಳಿದ ಮಾತುಗಳು ನನಗೆ ನೆನಪಾದುವು, ಮಾತ್ರವಲ್ಲ, ಅದು ನಿಜವಾಗಲೂಬಹುದು ಅನ್ನಿಸಿತು. ಬೇಸಿಗೆ ಕಳೆದು ಛಳಿಗಾಲ ಆರಂಭವಾಯಿತು. ಮನೆಯನ್ನು ಬೆಚ್ಚಗಿಡಲು ನಾನು ಕಿಟಕಿಗಳನ್ನು ಮುಚ್ಚುತ್ತಿದ್ದೆ. ಗಿಳಿ ಯಿಡ್ಡಿಷ್ ಮಾತನಾಡಲು ಕಲಿಯಿತು 'ಸೈಮನ್' ಎಂದು ನನ್ನನ್ನು ಅದು ಕರೆಯುತ್ತಿತ್ತು. ಸುಸಂಸ್ಕೃತರು ಬಂದು ಪೋಲಿಷ್ ಮಾತನಾಡಿದಾಗ ಅವರ ಮಾತುಗಳನ್ನು ಅನುಕರಿಸುತ್ತಿತ್ತು. ನಾನು ಮನೆಯೊಳಗೆ ಬರುತ್ತಿದ್ದಂತೆಯೇ ಬಂದು ಭುಜದ ಮೇಲೆ ಕೂರುತ್ತಿತ್ತು. ಕುದುರೆ ಲಾಯಕ್ಕೆ ಹೋದರೆ ಅಲ್ಲಿಗೂ ಬರುತ್ತಿತ್ತು. ಕೊಕ್ಕನ್ನು ಕಿವಿಯೊಳಗೆ ತೂರಿಸಿ, ಕಿವಿಯ ಹಾಲೆಯೊಡನೆ ಆಟವಾಡುತ್ತಾ ಪಕ್ಷಿಭಾಷೆಯಲ್ಲಿ ಏನೋ ರಹಸ್ಯಗಳನ್ನು ಹೇಳುತ್ತಿತ್ತು. ಮೊದಲು ನನಗೆ ಅದು ಹೆಣ್ಣುಗಿಳಿಯೋ ಅಥವಾ ಗಂಡುಗಿಳಿಯೋ ಎಂದು ತಿಳಿದಿರಲಿಲ್ಲ. ಒಮ್ಮೆ ಬಂದ ಮಂತ್ರವಾದಿಯೊಬ್ಬ ಅದು ಗಂಡುಗಿಳಿಯೆಂದು ಹೇಳಿದ. ನಾನು ಆ ಗಿಳಿಗೊಂದು ಹೆಣ್ಣುಗಿಳಿಯನ್ನು ಹುಡುಕಲಾರಂಭಿಸಿದೆ, ಹಾಗೆಯೇ ನನಗೂ ನನಗೆ ಬೇಕಾದವಳು ಸಿಗಬಹುದು ಅನ್ನಿಸುತ್ತಿತ್ತು.

'ಅಪರೂಪದ ಕತೆ' – ಮಾಟೆಲ್ ಮಧ್ಯೆ ಮಾತನಾಡಿದ.

'ಸ್ವಲ್ಪ ತಾಳು. ಒಮ್ಮೆ ನಾನು ಕುದುರೆಗಳನ್ನು ಕೊಟ್ಟು ಬರಲು ಎಸ್ಟೇಟೊಂದಕ್ಕೆ ಹೋಗಬೇಕಾಯಿತು. ಮೆಟೋಜನನ್ನು ನಾನು ತುಂಬಾ ಪ್ರೀತಿಸುತ್ತಿದ್ದುದರಿಂದ ಅದನ್ನು ಬಿಟ್ಟು ಹೋಗುವುದು ನನಗೆ ತುಂಬಾ ಕಷ್ಟವಾಯಿತು. ಆದರೆ ಏನು ಮಾಡುವುದು ? –ಈ ಸ್ಥಿತಿಯನ್ನು ಹೇಗೆ ವಿವರಿಸಲಿ? 'ಬದುಕು ಒಂದು ಹೋರಾಟ' ಅನ್ನುತ್ತಾರಲ್ಲ ಹಾಗೆ. ಬದುಕುವುದೆಂದರೆ ಯುದ್ಧ ಮಾಡಿದಂತೆಯೇ ಸರಿ. ನಾನು ಕುದುರೆಗಳೊಡನೆ ಎಸ್ಟೇಟಿಗೆ ಹೊರಟೆ. ಟೆಟ್ಸ್ಲಾಳನ್ನು ಕರೆದು–ಅವಳು ನನ್ನ ಸೇವಕಿ–ಗಿಳಿಯನ್ನು ನಿನ್ನ ಕಣ್ಣುಗಳಿಗಿಂತ ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೇಳಿದೆ. ಹಾಗೆ ನಾನು ಅವಳಿಗೆ ಹೇಳುವ ಅಗತ್ಯವೇ ಇರಲಿಲ್ಲ. ಗಿಳಿಯನ್ನು ಅವಳು ತುಂಬಾ ಹಚ್ಚಿಕೊಂಡಿದ್ದಳು–ನನ್ನ ಕುದುರೆಲಾಯದ ವ್ಯಕ್ತಿಯಂತೆಯೇ. ಒಂದೇ ಮಾತಿನಲ್ಲಿ ಹೇಳುವುದಾದರೆ 'ಗಿಳಿ

ನಮ್ಮೆಲ್ಲರಿಗೂ ಆತ್ಮೀಯ ಜೀವವಾಗಿತ್ತು. ನಾನು ಕುದುರೆಗಳನ್ನು ಒಳ್ಳೆಯ ಬೆಲೆಗೇ ಮಾರಿದೆ. ಎಲ್ಲ ಕೆಲಸಗಳೂ ಎಣ್ಣೆ ಹಚ್ಚಿದ ಗಾಲಿಯಂತೆ ಸುಗಮವಾಗಿ ಆಯಿತು. ನಾನು ಮನೆಗೆ ಹಿಂತಿರುಗಬೇಕೆಂದುಕೊಂಡೆ. ಆದರೆ ಹೊಸ ವ್ಯಾಪಾರವೊಂದು ಬಂದಿತು. ಗಿಳಿ ತನ್ನ ಜೊತೆಯಲ್ಲಿ ನನಗೆ ಅದೃಷ್ಟವನ್ನೂ ತಂದಿತ್ತು. ನಾನು ರಾತ್ರಿ ಅಲ್ಲಿಯೇ ಹೋಟೆಲಿನಲ್ಲಿ ಉಳಿಯಬೇಕಾಯಿತು. ಹೋಟೆಲ್ ಒಳಗೆ ಹೋಗುತ್ತಿದ್ದಂತೆಯೇ ಹೆಂಗಸೊಬ್ಬಳು ಕುಳಿತಿರುವುದು ನನಗೆ ಕಾಣಿಸಿತು. ಕುಳ್ಳಗೆ, ಕೊಂಚ ದಪ್ಪಗಿದ್ದ, ಗಿಡ್ಡ ಮೂಗಿನ ಹೊಳಪುಗಣ್ಣಿನ ಅವಳು ನನ್ನತ್ತ ನೋಡಿ, ಬಹಳ ದಿನಗಳಿಂದ ಪರಿಚಯವಿರುವಂತೆ ಮುಗುಳ್ನಕ್ಕಳು. ಹೊರಗೆ, ಇವತ್ತಿನಂತೆಯೇ ಥಂಡಿ ಗಾಳಿ ಬೀಸುತ್ತಿತ್ತು. ಆ ದಿನ ಹೋಟೆಲಿನಲ್ಲಿ ನಾವಿಬ್ಬರೇ ಅತಿಥಿಗಳು. ಹೋಟೆಲಿನ ಯಜಮಾನಿ ನಮಗಾಗಿ ಊಟ ಸಿದ್ಧಪಡಿಸುತ್ತಿದ್ದಳು. 'ನಿಮ್ಮಲ್ಲಿ ವೋಡ್ಕಾ ಇದೆಯಲ್ಲವೇ'–ನಾನು ಕೇಳಿದೆ. ನಾನೇನು ಹೆಚ್ಚು ಕುಡಿಯುವವನಲ್ಲ. ಆದರೆ ವ್ಯಾಪಾರದಲ್ಲಿ ಕೆಲವೊಮ್ಮೆ ಕುಡಿಯಬೇಕಾಗುತ್ತದೆ. ವ್ಯವಹಾರ ಮುಗಿದಾಗ ಮಾರಿದವನು ಕೊಂಡವನು ಇಬ್ಬರೂ ಕೈ ಕುಲುಕಿ ಪಾನೀಯ ಸೇವಿಸುವುದು ರೂಢಿ. ಹೋಟೆಲಿನ ಯಜಮಾನಿ ಒಂದು ಬಾಟಲಿನಲ್ಲಿ ವೋಡ್ಕಾವನ್ನೂ, ಬಟ್ಟಲಿನಲ್ಲಿ ಖಾರದ ಬೀಜಗಳನ್ನೂ ತಂದಿಟ್ಟಳು. 'ನೀವೂ ಸ್ವಲ್ಪ ತೆಗೆದುಕೊಳ್ಳಬಹುದಲ್ಲವೇ ?' ನಾನು ಆ ಹೆಂಗಸನ್ನು ಕೇಳಿದೆ. 'ಖಂಡಿತಾ. ನನಗಿನ್ನೂ ಬದುಕನ್ನು ಅನುಭವಿಸುವ ಶಕ್ತಿಯಿದೆ. ಸಂತೋಷಪಡಬಲ್ಲೆ' ಎಂದು ಹೇಳಿ ನಕ್ಕಳು. ನಾನು ಒಂದು ಗ್ಲಾಸಿಗೆ ಸುರಿದುಕೊಟ್ಟೆ. ಅವಳು ಅದು ಏನೂ ಅಲ್ಲವೆಂಬಂತೆ ಒಂದೇ ಗುಟುಕಿಗೆ ಕುಡಿದು ಮುಗಿಸಿದಳು. ಖಾರದ ಬೀಜಗಳನ್ನು ಸ್ವಲ್ಪವೂ ಮುಟ್ಟಲಿಲ್ಲ. ನಂತರ ಮತ್ತೊಂದು ಗ್ಲಾಸ್ ತೆಗೆದುಕೊಂಡಳು. ಹಸುವನ್ನು ನೋಡುತ್ತೇನೆಂದು ಹೋಟೆಲಿನ ಯಜಮಾನಿ ಮನೆಯ ಹಿಂಭಾಗಕ್ಕೆ ಹೋಗಿದ್ದಳು. ನಾವಿಬ್ಬರೇ ಇದ್ದೆವು. ಅವಳು ಇನ್ನೂ ಒಂದು ಗ್ಲಾಸ್ ಕುಡಿದಳು. ನಾನು ಸಾಮಾನ್ಯವಾಗಿ ಹೆಚ್ಚು ಕುಡಿಯುತ್ತಿರಲಿಲ್ಲ. ಒಮ್ಮೊಮ್ಮೆ ಕುಡಿದರೂ ಎಚ್ಚರ ತಪ್ಪುತ್ತಿರಲಿಲ್ಲ. ಒಂದು ಬಾಟಲ್ ಒಮ್ಮೆಗೆ ಕುಡಿದು ದಕ್ಕಿಸಿಕೊಳ್ಳುತ್ತಿದ್ದೆ. ಅವಳ ಬಗ್ಗೆ ನನಗೆ ಆತಂಕವಾಯಿತು. ಆದರೆ ನಾನೆಣಿಸಿದಂತೆ ಅವಳು ಎಚ್ಚರ ತಪ್ಪಲಿಲ್ಲ. ಬದಲಾಗಿ ಆರಾಮಾಗಿ ಕುಳಿತು ನಗುತ್ತಿದ್ದಳು. ನಾವಿಬ್ಬರೂ ಈಗ ಮೊದಲಿಗಿಂತ ಹೆಚ್ಚು ಲವಲವಿಕೆಯಿಂದಿದ್ದೆವು. ಆತ್ಮೀಯ

ರಾಗಿದ್ದೆವು. ಬಾಲ್ಯಗೆಳೆಯರಂತೆ ಏನೆಲ್ಲ ಮಾತನಾಡುತ್ತಿದ್ದೆವು. ತನ್ನ ಹೆಸರು 'ಎಸ್ತರ್' ಎಂದು ಹೇಳಿದಳು. ಅವಳು ಪೋಲ್ಯಾನಿಯ ಕಡೆಯವಳು. 'ತರುಣಿಯಾದ ನೀನು ಹೋಟೆಲಿನಲ್ಲಿ ಒಬ್ಬಳೇ ಇರುವುದು ಏಕೆ?' ಎಂದು ನಾನು ಕೇಳಿದೆ. 'ಕಳ್ಳಸಾಗಾಣಿಕೆದಾರನೊಬ್ಬನನ್ನು ಕಾಯುತ್ತಿದ್ದೇನೆ' ಎಂದಳು.

'ಕಳ್ಳಸಾಗಾಣಿಕೆದಾರ ! ಯಾಕೆ ?' ನಾನು ಕೇಳಿದೆ.

ಅವಳು ಅವನೊಡನೆ ಅಮೇರಿಕಕ್ಕೆ ಹೋಗುತ್ತಿದ್ದೇನೆಂದು ಹೇಳಿದಳು. 'ಈ ದೇಶದಲ್ಲಿ ನಿನಗೆ ಏನು ತೊಂದರೆ ? ನಾನು ಕೇಳಿದೆ.

ಅವಳಿಗೆ ಒಬ್ಬನೊಡನೆ ಪ್ರೇಮವ್ಯವಹಾರವಿದ್ದಿತು. ಆತ ಇವಳನ್ನು ತಿರಸ್ಕರಿಸಿದ್ದ. ಅವನಿಗಾಗಲೇ ಮದುವೆಯಾಗಿ ಹೆಂಡತಿಯಿದ್ದಳು. ಆತನೊಬ್ಬ 'ಟ್ರಾವೆಲಿಂಗ್ ಸೇಲ್ಸ್‌ಮನ್'. ಅಂಥವರಿಗೆ ಹುಡುಗಿಯರೊಡನೆ ಚೆಲ್ಲಾಟ ಹೆಮ್ಮೆಯ ಸಂಗತಿ. ಆತನಿಗೆ ಅನೇಕ ಹುಡುಗಿಯರೊಡನೆ ಸಂಬಂಧವಿದ್ದಿರಬೇಕು. 'ನಾನು ಅವನೊಡನೆ ಆಟವಾಡಿದೆ. ನನ್ನನ್ನು ಕಳೆದುಕೊಂಡೆ. ಮತ್ತೆ ಮನೆಯಲ್ಲಿ ಮುಖ ತೋರಿಸಲಾರೆ' ಎಂದವಳು ಹೇಳಿದಳು. ಇವಳಿಗೂ ಗಂಡನಿದ್ದು, ಅವನಿಂದ ವಿಚ್ಛೇದನ ಪಡೆದಿದ್ದಳು. ಅವಳ ತಂದೆ ತುಂಬಾ ಒಳ್ಳೆಯ ಮನುಷ್ಯನಾಗಿದ್ದು ಇವೆಲ್ಲವನ್ನೂ ತಾಳಿಕೊಳ್ಳುತ್ತಿರಲಿಲ್ಲ. ಹೀಗಾಗಿ ಅವಳು ಊರು ಬಿಡಲು ಸಿದ್ಧಳಾಗಿದ್ದಳು. ಕಳ್ಳಸಾಗಾಣಿಕೆದಾರ ಅವಳನ್ನು ಜರ್ಮನ್ ಗಡಿಗೆ ತಲುಪಿಸುವ ಭರವಸೆ ನೀಡಿದ್ದ.

'ಅಮೇರಿಕಾದಲ್ಲಿ ಹೋಗಿ ಏನು ಮಾಡುವೆ ?' ನಾನು ಕೇಳಿದೆ. 'ರವಿಕೆಗಳನ್ನು ಹೊಲಿಯುತ್ತೇನೆ. ಎಂಥ ಸಣ್ಣ ಕೆಲಸ ಮಾಡಿದರೂ ದುಡ್ಡು ಸಿಗುತ್ತದಲ್ಲವೇ ?' ಅವಳು ಉತ್ತರಿಸಿದಳು. ನಾನು ಅವಳಿಗೆ ನಾಲ್ಕನೆಯ ಬಾರಿ ಗ್ಲಾಸಿಗೆ ವೋಡ್ಕಾ ಹಾಕಿದೆ. ಐದನೆಯದೂ ಮುಗಿಯಿತು. 'ನೀವು ನನಗೆ ಮೊದಲೇ ಏಕೆ ಭೇಟಿಯಾಗಲಿಲ್ಲ ? ನಿಮ್ಮಂಥವರು ಗಂಡನಾಗಿದ್ದರೆ ಚೆಂದಿತ್ತು' ಎಂದಳು. 'ಈಗಲೂ ತಡವಾಗಿಲ್ಲ' ಎಂದೆ ನಾನು. ಯಾಕೆ ಸುತ್ತು ಬಳಸಿ ಹೇಳುವುದು ? ಹೋಟೆಲಿನ ಯಜಮಾನಿ ಹಿಂತಿರುಗುವ ವೇಳೆಗೆ ನಮ್ಮ ನಡುವೆ ಒಪ್ಪಂದವಾಗಿತ್ತು. ಅಯಸ್ಕಾಂತದಂತೆ ಅವಳು ನನ್ನನ್ನು ಸೆಳೆದಿದ್ದಳು. ಅವಳಿಗೂ ಹಾಗೇ ಅನ್ನಿಸಿತ್ತಂತೆ. ಕೈ ಕೈ ಹಿಡಿದು ಅಪ್ಪಿಕೊಂಡು ಮುತ್ತಿನ ಮಳೆಗರೆದೆವು.

ಅವಳ ಮುತ್ತುಗಳ ಹೊಳೆಯಲ್ಲಿ ನಾನು ಹುಚ್ಚನಂತೆ ತೇಲಿದೆ. ಅವಳು ಬರಿಯ ಹೆಣ್ಣಾಗಿರಲಿಲ್ಲ, ಬೆಂಕಿಯ ಚೂರಾಗಿದ್ದಳು. ಹೋಟೆಲ್ ಯಜಮಾನಿಗೆ ಇದೆಲ್ಲ ತಿಳಿಯುವುದು ನನಗಿಷ್ಟವಿರಲಿಲ್ಲ. ನಾನು ನನ್ನ ಕೊಠಡಿಗೆ ಹೋಗಿ ಮೈ ಚೆಲ್ಲಿದೆ. ಮೈ ಕೆಂಡದಂತೆ ಸುಡುತ್ತಿತ್ತು. ನನ್ನ ಪಕ್ಕದ ಕೊಠಡಿಯಲ್ಲೇ ಅವಳು ಮಲಗಿದ್ದಳು. ಮಧ್ಯೆಯಿದ್ದ ಆ ತೆಳುಗೋಡೆಯಿಂದಾಚೆ ಅವಳು ಹಾಸಿಗೆಯಲ್ಲಿ ಚಡಪಡಿಸುತ್ತ ಹೊರಳಾಡುತ್ತಿದ್ದ ಶಬ್ದ ಸ್ಪಷ್ಟವಾಗಿ ಕೇಳಿಸುತ್ತಿತ್ತು. ನಸುಕಿನಲ್ಲಿ ನನಗೆ ನಿದ್ದೆ ಬಂದಂತಾಯಿತು. ನಾನು ಬೆಳಿಗ್ಗೆ ಬೇಗನೇ ಹೊರಡಬೇಕಿತ್ತು. ನನ್ನೊಡನೆ ಅವಳೂ ಬರುವುದೆಂದು ಮೊದಲೇ ತೀರ್ಮಾನಿಸಿದ್ದೆವು. ಅವಳು ಅಮೇರಿಕಾಕ್ಕೆ ಹೋಗುವ ವಿಚಾರ ಅಲ್ಲಿಗೇ ನಿಂತಿತು. ಅವಳೀಗ ಕಳ್ಳಸಾಗಾಣಿಕೆದಾರನಿಗೆ ಕಾಯುವ ಅಗತ್ಯವಿರಲಿಲ್ಲ.

ನಾನು ಕೊಠಡಿಯಿಂದ ಹೊರಬರುವ ವೇಳೆಗಾಗಲೇ ಅವಳು ತನ್ನ ವಸ್ತುಗಳೊಂದಿಗೆ ಸಿದ್ಧಳಾಗಿ ನಿಂತಿದ್ದಳು. ನನ್ನತ್ತ ನೋಡಿ ಮುಗುಳ್ನಕ್ಕಳು. ಅವಳ ಕಣ್ಣುಗಳು ಹೊಳೆಯುತ್ತಿದ್ದುವು. ಅವಳು ನನ್ನೊಡನೆ ಬರುತ್ತಾಳೆಂಬ ವಿಷಯ ಕೇಳಿ ಹೋಟೆಲಿನ ಯಜಮಾನಿ ಹಿಂದಿನ ರಾತ್ರಿ ಏನು ನಡೆದಿರಬಹುದೆಂದು ಊಹಿಸಿದಳು. ಆದರೆ ನಾನು ಆ ಬಗ್ಗೆ ಚಿಂತಿಸಲಿಲ್ಲ, ನನ್ನ ಹೃದಯವನ್ನು ಆಗಲೇ ಎಸ್ತರ್‌ಗೆ ಅರ್ಪಿಸಿಯಾಗಿತ್ತು. ಅವಳು ಗಾಡಿಯಲ್ಲಿ ನನ್ನ ಪಕ್ಕದಲ್ಲಿಯೇ ಕುಳಿತುಕೊಂಡಳು. ಬೀಳಬಹುದೆಂಬ ಹೆದರಿಕೆಯಿಂದ ನನ್ನನ್ನು ಗಟ್ಟಿಯಾಗಿ ತಬ್ಬಿಹಿಡಿದಿದ್ದಳು. ಅವಳ ಹಿಡಿತ ದಾರಿಯುದ್ದಕ್ಕೂ ನನ್ನನ್ನು ಉದ್ವೇಗಗೊಳಿಸುತ್ತಿತ್ತು. ನಾವಿಬ್ಬರೂ ಮದುವೆಯಾಗಲು ನಿರ್ಧರಿಸಿದೆವು. ನಮಗೆ ವಿಶೇಷ ಸಮಾರಂಭದ ಅಗತ್ಯವಿರಲಿಲ್ಲ. ನಾನು ವಿಧುರ, ಅವಳು ವಿಚ್ಛೇದನ ಪಡೆದವಳು. ನಾವು ಪ್ರಧಾನ ಗುರುವಿನ ಸಹಾಯಕನಾದ ಗೆಟೆಲ್ ಬಳಿ ಹೋದರೆ ಅತ ನಮಗೆ ಮದುವೆ ಮಾಡಿಸುತ್ತಾನೆ. ನಾನವಳಿಗೆ ಗಳಿಯ ಬಗ್ಗೆ ಹೇಳಿದೆ. ಅವಳು 'ಅದಕ್ಕೆ ನಾನು ತಾಯಿಯಾಗುವೆ' ಎಂದಳು. ಅದು ನಮ್ಮ ಮಗುವೆಂಬಂತೆ ನಾವಿಬ್ಬರೂ ಅದರ ಬಗ್ಗೆಯೇ ಹೆಚ್ಚು ಮಾತನಾಡಿದೆವು.

'ನೀನವಳನ್ನು ನಿಜವಾಗಿ ಮದುವೆಯಾದೆಯಾ?' ಲೈಬೆಲ್ ಕೇಳಿದ

'ಇಲ್ಲ'

'ಯಾಕೆ?'

'ಅವಳು ವಿಚ್ಛೇದನ ಪಡೆದವಳು. ನಾನು ಕೊಹೆನ್ (cohen)* ಧಾರ್ಮಿಕ ನಿಯಮವನ್ನು ನಾನು ಮರೆತಿದ್ದೆ.'

'ಯಾರು ನೆನಪಿಸಿದರು ? ಪ್ರಧಾನ ಗುರುವಿನ ಸಹಾಯಕನಾ ?'

'ಮತ್ತಿನ್ಯಾರು ?'

'ಎಂಥ ಕತೆ !'

೪

'ಗೆಟೆಲ್ ನಾವು ಮದುವೆಯಾಗುವುದು ಸಾಧ್ಯವಿಲ್ಲವೆಂದು ಹೇಳಿದಾಗ ನನಗೆ ಅವನನ್ನು ಸಿಗಿದು ಚೂರು ಮಾಡುವಷ್ಟು ಸಿಟ್ಟು ಬಂದಿತ್ತು. ಆದರೆ ಅದು ಅವನ ತಪ್ಪೆ ? ರೋಶ್ ಹಸನತ್ ಮತ್ತು ಯಾಮ್‌ಕಿಪ್ಪುರ್‌ಗಳಲ್ಲಿ ಬಿಟ್ಟರೆ ನಾನೆಂದೂ ಪ್ರಾರ್ಥಿಸಲು ಹೋಗುತ್ತಿರಲಿಲ್ಲ. ಇದ್ದಕ್ಕಿದ್ದಂತೆ ನಾನು ಪಾದ್ರಿಯ ಸಾಲಿನಿಂದ ಕೆಳಗಿಳಿದ ಕೊಹೆನ್ ಆಗಿದ್ದೆ. ನಾನು ಎಸ್ತರ್‌ಳನ್ನು ಕರೆದುಕೊಂಡು ಮನೆಗೆ ಹೋದೆ. "ನಾನು ಕ್ಯಾಥೊಲಿಕ್ ಪಾದ್ರಿ, ನೀನು ನನ್ನ ಗೃಹಕೃತ್ಯದವಳು ಎಂದು ನಟಿಸುವಾ' ಎಂದವಳಿಗೆ ಹೇಳಿದೆ. ನಾನು ನಗರದಿಂದ ಬಹುದೂರ ವಾಸಿಸುತ್ತಿದ್ದುದರಿಂದ ನಮ್ಮನ್ನು ಬಾಗಿಲ ಸಂದಿನಿಂದ ಇಣಕಿನೋಡುವ ಜನ ವಿರಲಿಲ್ಲ. ಮೊದಲು ಅವಳು ನಿರಾಶಳಾದಳು. ಅವಳ ಮನೆಯವರಿಗೆ ಏನೆಂದು ತಿಳಿಸಬೇಕು ? ನಾವಿಬ್ಬರೂ ಗಾಢ ಪ್ರೀತಿಯಲ್ಲಿದ್ದುದರಿಂದ ರಾತ್ರಿಯವರೆಗೆ ಕಾಯುವುದೂ ಸಹ ನಮಗೆ ಕಷ್ಟವಾಯಿತು. ಮೆಟೋಜ ಬಹುಬೇಗ ಅವಳಿಗೆ ಪ್ರಿಯವಾಯಿತು. ಅವಳು ಮನೆಯೊಳಗಡೆ ಬಂದ ತಕ್ಷಣವೇ ಮೆಟೋಜ ಹೋಗಿ ಅವಳ ಹೆಗಲ ಮೇಲೆ ಕುಳಿತುಕೊಂಡಿತು. ಅವಳು ಅದರ ಕೊಕ್ಕಿಗೆ ಮುತ್ತನಿತ್ತಳು. ಅದು ಓಂತಿರುಗಿಸಿತು. ಈ ಗಿಳಿ ನಮ್ಮ ಮದುವೆಯ ಮಧ್ಯಸ್ಥಗಾರ ಎಂದು ಹೇಳಿ ಅಲಿಮಾರಿ ಹೇಳಿದ್ದ ಕತೆಯನ್ನು ನಾನು ಎಸ್ತರ್‌ಳಿಗೆ ಹೇಳಿದೆ.

ಮೊದಮೊದಲು ಎಲ್ಲವೂ ಸುಗಮವಾಗಿ ಸಾಗುತ್ತಿತ್ತು. ನಾವಿಬ್ಬರೂ ಎರಡು ಪಾರಿವಾಳಗಳಂತಿದ್ದೆವು. ನಗರದಲ್ಲಿ ನಮ್ಮ ಬಗ್ಗೆ ಪಿಸುಮಾತುಗಳಿದ್ದುವು. ಆದರೆ ಅದಕ್ಕೆ ನಾವು ಗಮನಕೊಡಲಿಲ್ಲ. ಕುದುರೆ ವ್ಯಾಪಾರಿ ಸೈಮನ್ ಒಳ್ಳೆಯ

ನಲ್ಲವೆಂದು ಹೇಳುತ್ತಾರೆಂದಿಟ್ಟುಕೊಳ್ಳಿ' ಆದರಿಂದೇನಾಯಿತು ? ಧರ್ಮಗ್ರಂಥವನ್ನು ಪಠಿಸಲು ಕರೆಯುದರಬಹುದು, ಅಡ್ಡಿಯಿಲ್ಲ. ಆದರೆ ಎಸ್ತರ್‌ಗೆ ಮಗು ಬೇಕಾಗಿತ್ತು. ಅದು ಸಮಸ್ಯೆಯಾಯಿತು. ಮಗು ಅನೈತಿಕ ಸಂಬಂಧದಿಂದ ಹುಟ್ಟಿದುದು, 'ಜಾರಜ' ಎಂದಾಗುತ್ತದಲ್ಲವೇ ? ಧರ್ಮಗ್ರಂಥಗಳನ್ನು ಅಧ್ಯಯನ ಮಾಡಿದ ಕೆಲವರು ಇಂಥ ಮಗುವಿಗೆ ಬೇರೇನೋ ಹೆಸರಿದೆಯೆಂದು ಹೇಳಿದರು. ಆದರೆ ಎಲ್ಲವೂ ಒಂದೇ! ಎಸ್ತರ್ ನಾವಿಬ್ಬರೂ ಮದುವೆಯಾಗಿದ್ದೇವೆಂದು ಅವರ ತಂದೆ ತಾಯಿಗಳಿಗೆ ಬರೆದಿದ್ದಳು. ಅವರು ನಮ್ಮಲ್ಲಿಗೆ ಬರಲು ಬಯಸಿದರು. ಈಗ ಸಮಸ್ಯೆ ನಿಜಕ್ಕೂ ಜಟಿಲವಾಯಿತು. ಅವಳೊಬ್ಬಳೊಡನೆ ಇರುವುದರಲ್ಲಿಯೇ ನನಗೆ ಸಮಾಧಾನವಿತ್ತು. ಎಸ್ತರ್ ಮತ್ತು ಮಟೋಜ–ಇವರಿಬ್ಬರೇ ನನಗ ಸಾಕಾಗಿತ್ತು. ಆದರೆ ಅವಳಿಗೆ ನಗರ ಬೇಕಾಗಿತ್ತು. ಅವಳಾಗಿಯೇ ನಗರಕ್ಕೆ ಹೋಗಲು ಆಸಕ್ತಿ ಪ್ರಕಟಿಸಿದಳು. ನಗರದಲ್ಲಿ ನನಗೆ ಗೆಳೆಯರಿದ್ದರ ಅವರನ್ನು ಮನಗೆ, ಊಟಕ್ಕೆ ಆಹ್ವಾನಿಸಲು ಹೇಳಿದಳು. ಅವಳು ಮಾಡಿದ ಅಡಿಗೆ ಅತ್ಯಂತ ರುಚಿಯಾಗಿರುತ್ತಿತ್ತು. ಅವಳು ತಯಾರಿಸುತ್ತಿದ್ದ ಕೇಕ್ ಯಾವುದೇ ಅತ್ಯುತ್ತಮ ಬೇಕರಿಗಿಂತಲೂ ಚೆನ್ನಾಗಿರುತ್ತಿತ್ತು. ಅವಳು ಅತ್ಯಂತ ಚೆನ್ನಾದ ಉಡುಪುಗಳನ್ನೂ ಧರಿಸುತ್ತಿದ್ದಳು-ಆದರೆ ಯಾರಿಗಾಗಿ ಎಂಬುದೇ ಪ್ರಶ್ನೆ. ಹೊಲಗಳಲ್ಲಿರುವಾಗ ಅವಳು ಸಾಮಾನ್ಯ ಉಡುಗೆಯಲ್ಲಿರುತ್ತಿದ್ದಳು. ಕೆಲವೊಮ್ಮೆ ಅವಳು ಅಮೇರಿಕಾಕ್ಕೆ ಹೋಗೋಣವೆಂದು ಒತ್ತಾಯಿಸುತ್ತಿದ್ದಳು. ಹಾಗೆ ಮಾಡಿದ್ದರೇ ಚೆನ್ನಾಗಿರುತ್ತಿತ್ತೇನೋ, ಆದರೆ ನನಗೆ ಸಾವಿರಾರು ಮೈಲಿ ದೂರ ಹೋಗುವ ಆಸೆಯಿರಲಿಲ್ಲ. ನನಗ ಮನೆಯಿತ್ತು, ಕುದುರೆಲಾಯವಿತ್ತು, ಸಾಕಷ್ಟು ಹುಲ್ಲುಗಾವಲಿತ್ತು. ಇವೆಲ್ಲವನ್ನು ಮಾರಿದರೂ ಅಂಥ ಭಾರೀ ಹಣವೇನೂ ಬರುತ್ತಿರಲಿಲ್ಲ. ಅಮೇರಿಕಾದಲ್ಲ ಹೋಗಿ ನಾನೇನು ಮಾಡಬಹುದು? ಬಟ್ಟೆಗಳನ್ನು ಇಸ್ತ್ರಿ ಮಾಡಬೇಕಷ್ಟೆ ! ಜೊತಗೆ ಗಿಳಿಯನ್ನು ನಾನು ತುಂಬಾ ಹಚ್ಚಿಕೊಂಡಿದ್ದೆ. ಅದನ್ನು ಬಿಟ್ಟು ಹೋಗುವುದು ನನ್ನಿಂದ ಸಾಧ್ಯವೇ ಇರಲಿಲ್ಲ. ಅಲ್ಲದೆ ಗಿಳಿಯನ್ನು ಬೇರೊಂದು ಪ್ರಾಂತ್ಯಕ್ಕೆ, ಸಮುದ್ರದಾಚೆ ಕೊಂಡೊಯ್ಯುವುದೂ ಅಷ್ಟು ಸುಲಭವಲ್ಲ. ನನ್ನಲ್ಲಿದ್ದ ಹೆಣ್ಣು ಕುದುರೆಯ ಬಗ್ಗೆಯು ನನಗೆ ಗಾಢ ಪ್ರೀತಿಯಿತ್ತು. ನಾನು ಅದನ್ನೆಲ್ಲಿ ಬಿಟ್ಟು ಹೋಗುವುದು ? ಅದಕ್ಕೂ ಸಾಕಷ್ಟು ವಯಸ್ಸಾಗಿತ್ತು. ಗಾಡಿಹೊಡೆಯುವವನ ಕೈಗೆ

ಸಿಕ್ಕಿದರೆ ಚಾವಟಿಯೇಟಿನಿಂದ ಖಂಡಿತಾ ಅದು ಸಾಯುತ್ತಿತ್ತು. 'ನಾವಿಬ್ಬರೂ ಪರಸ್ಪರ ಪ್ರೀತಿಸುತ್ತೇವೆ. ಆರಾಮವಾಗಿ ಇಲ್ಲಿಯೇ ಇರೋಣ. ಯಾರು ಏನಾದರೂ ಅಂದುಕೊಳ್ಳಲಿ, ಅದಕ್ಕೆಲ್ಲಾ ಗಮನಕೊಡುವುದು ಬೇಡ 'ಎಂದು ನಾನು ಎಸ್ತರ್‌ಳಿಗೆ ಬಗೆಬಗೆಯಾಗಿ ಹೇಳಿದೆ. ಆದರೆ ಅವಳು ಜನಗಳ ಮಾತಿಗೆ ಕಿವಿಗೊಡುತ್ತಿದ್ದಳು. ನಗರಕ್ಕೆ ಹೋಗಿ ಅನೇಕರ ಪರಿಚಯ ಮಾಡಿಕೊಂಡಿದ್ದಳು, ಕೀಳುಮಟ್ಟದ ಜನಗಳ ಜೊತೆ ಅವಳಿಗೆ ಸಂಪರ್ಕವಿತ್ತು. ಅವಳು ಅಲ್ಲಿ ಏನೇನು ಮಾಡುತ್ತಿದ್ದಳೋ ಯಾರಿಗೆ ಗೊತ್ತು ? ಕೆಲವು ಕುದುರೆ ವ್ಯಾಪಾರಿಗಳನ್ನು ಪಾರ್ಟಿಗೆ ಆಹ್ವಾನಿಸಲು ನನ್ನನ್ನು ಒತ್ತಾಯಿಸುತ್ತಿದ್ದಳು. ಆದರೆ ನಾನು ವಿಧುರನಾದಾಗಿನಿಂದಲೂ ಎಲ್ಲರೊಡನೆ ಹೆಚ್ಚು ಬೆಳೆಯುತ್ತಿರಲಿಲ್ಲ. ಹೀಗಾಗಿ ಅವರು ಹೊರವಲಯದ ನಮ್ಮ ಎಸ್ಟೇಟಿಗೆ ಬರಲು ಉತ್ಸಾಹ ತೋರಲಿಲ್ಲ. ಬಂದ ಕೆಲವರು ನಮಗೇನೋ ಉಪಕಾರ ಮಾಡಿದಂತೆ ವರ್ತಿಸಿದರು. ಅವರು ಹೋದನಂತರ ಎಸ್ತರ್ ಬಹಳ ಹೊತ್ತು ಅಳುತ್ತಿದ್ದಳು.

ಯಾಕೆ ಸುಮ್ಮನೆ ಸುತ್ತು ಬಳಸಿ ಹೇಳುವುದು ? ನಾವು ಜಗಳವಾಡಲು ಆರಂಭಿಸಿದೆವು. ಅಲ್ಲ, ಅವಳು ಜಗಳವಾಡತೊಡಗಿದಳು. ಬೈದಳು, ಶಾಪ ಹಾಕಿದಳು, ಅತ್ತಳು. ಅವಳನ್ನು ಅಡ್ಡದಾರಿಗೆಳೆದು ಹಾಳು ಮಾಡಿದನೆಂದು ಹಲುಬಿದಳು. ನಾನು ಅವಳಿಗೆ ಮೊದಲೇ ನಾನೊಬ್ಬ ಕೊಹೆನ್ (cohen)* ಎಂದು ಯಾಕೆ ಹೇಳಲಿಲ್ಲವೆಂದು ಆಕ್ಷೇಪಿಸಿದಳು. ನನಗೆ ನಾನೊಬ್ಬ ಕೊಹೆನ್ (cohen)* ಎಂಬುದು ನೆನಪಿರಲಿಲ್ಲ. ತಾಯಿಯ ಗರ್ಭದಲ್ಲಿರುವಾಗ ಮಗು ಏನು ಸೇವಿಸಿರುತ್ತದೆಂದು ನಂತರ ಆ ಮಗುವಿಗೆ ಹೇಗೆ ನೆನಪಿರಬೇಕು ಹೇಳಿ ? ನನ್ನ ಪಕ್ಕದಲ್ಲೇ ಮಲಗಿ ರಾತ್ರಿಯೆಲ್ಲಾ ದೆವ್ವ ಹಿಡಿದವಳಂತೆ ಏನೆಲ್ಲ ಅಸಂಬದ್ಧ ಮಾತುಗಳನ್ನಾಡುತ್ತಿದ್ದಳು. ಅವಳು ಮಾಡುತ್ತಿದ್ದ ಕೆಲವು ಕೆಲಸಗಳನ್ನು ನೋಡಿದರೆ ನಂಬಲಾಗುತ್ತಿರಲಿಲ್ಲ. ಇವಳೇಯಾ ನನ್ನ ಎಸ್ತರ್ ?–ಎಂದು ಆಶ್ಚರ್ಯವಾಗುತ್ತಿತ್ತು. ನಮ್ಮ ಕಡೆ ಬಳಕೆಯಲ್ಲಿಲ್ಲದ ಅನೇಕ ಹೆಸರುಗಳಿಂದೆಲ್ಲ ಅವಳು ನನ್ನನ್ನು ಕರೆಯುತ್ತಿದ್ದಳು. ಇದ್ದಕ್ಕಿದ್ದಂತೆ ಅವಳು ಗಿಳಿಯನ್ನು ದ್ವೇಷಿಸತೊಡಗಿದಳು. ಅದು ಸದಾ ಕಿರುಚುತ್ತದೆ, ಅದು ಮನೆಯನ್ನೆಲ್ಲಾ ಹೊಲಸು ಮಾಡುತ್ತದೆ, ರಾತ್ರಿ ನಿದ್ದೆ ಮಾಡಲು ಬಿಡುವುದಿಲ್ಲ–ಹೀಗೆ ದೂರುಗಳು ಬೆಳೆಯತೊಡಗಿದವು.

ನಾನು ಅವಳಿಗಿಂತ ಹೆಚ್ಚಾಗಿ ಗಿಳಿಯನ್ನು ಪ್ರೀತಿಸುತ್ತೇನೆಂದು ಅಸೂಯೆಪಟ್ಟಳು, ಆಕ್ಷೇಪಿಸಿದಳು.

ಇದೆಲ್ಲಾ ಒಳ್ಳೆಯದಕ್ಕಲ್ಲವೆಂದು ನನಗೆ ಅನ್ನಿಸುತ್ತಿತ್ತು. ಮೆಟೋಜನ ದೇನು ತಪ್ಪು ? ಅದು ದೇವತೆಯಂಥ ಒಳ್ಳೆಯ ಗಿಳಿ. ರಾತ್ರಿಯ ವೇಳೆ ಅದು ಗಲಾಟೆ ಮಾಡುತ್ತಿರಲಿಲ್ಲ. ತನ್ನ ಪಾಡಿಗೆ ತಾನಿರುತ್ತಿತ್ತು. ಆದರೆ ಬೆಳಿಗ್ಗೆ ಹಕ್ಕಿಗಳು ಹಾಸಿಗೆಯಲ್ಲಿ ಮಲಗಿ ಗೊರಕೆ ಹೊಡೆಯಲಾರವು. ಮುಂಜಾನೆ ಹಕ್ಕಿಗಳು ಹಾಡತೊಡಗುತ್ತವೆ. ಎಸ್ತರ್ ರಾತ್ರಿ ಹನ್ನೊಂದು ಗಂಟೆಯಲ್ಲಿ ತಲೆಬಾಚಿಕೊಳ್ಳುತ್ತಿದ್ದಳು. ಅಥವಾ ಕೇಕ್ ಮಾಡಲು ತೊಡಗುತ್ತಿದ್ದಳು. ಮಧ್ಯರಾತ್ರಿ ಎರಡು ಗಂಟೆಗೆ ಮಲಗುತ್ತಿದ್ದಳು. ಎಷ್ಟೋ ವೇಳೆ ನನಗೆ ಇದು ಮನೆಯಲ್ಲ ಅನ್ನಿಸುತ್ತಿತ್ತು. ಆದರೆ ಏನು ಮಾಡಲು ಸಾಧ್ಯ ? ಒಂದು ನಿಮಿಷ ಅವಳು ಸಭ್ಯಳಾಗಿ ನಡೆದುಕೊಂಡರೆ ಮರುಕ್ಷಣದಲ್ಲಿಯೇ ಹುಚ್ಚಿಳಂತೆ ವರ್ತಿಸುತ್ತಿದ್ದಳು. ಕಾಲೆಶ್ಜ ನಲ್ಲಿ ಒಂದು ಟೀ ಅಂಗಡಿಯಿತ್ತು. ಅಲ್ಲಿ ಅಸಭ್ಯ ಜನರೆಲ್ಲ ಸೇರುತ್ತಿದ್ದರು. ಅವಳು ನನ್ನನ್ನು ಅಲ್ಲಿಗೆ ಬಲವಂತವಾಗಿ ಕರೆದುಕೊಂಡು ಹೋಗುತ್ತಿದ್ದಳು. ನಾನು ಅಲ್ಲಿ ಕುಳಿತು ಟೀ ಕುಡಿಯುತ್ತಿದ್ದರೆ, ಅವಳು ಅವರೆಲ್ಲರೊಡನೆ ಸ್ನೇಹ ಬೆಳಸುತ್ತಿದ್ದಳು. ಯಾರೋ ಅಪರಿಚಿತರನ್ನು ಭೇಟಿಯಾದರೆ, ನಮ್ಮ ಖಾಸಗಿ ಸಂಗತಿಗಳನ್ನೆಲ್ಲಾ ಅವರೊಡನೆ ಹೇಳುತ್ತಿದ್ದಳು. ನಾನು ಉಕ್ಕಿಗಿಂತ ಹೆಚ್ಚು ಬಲಶಾಲಿಯಾದರೂ ಅವಮಾನದಲ್ಲಿ ಬೇಯುವುದು ಕಷ್ಟವಾಗುತ್ತಿತ್ತು. ಅದು ನನಗಿಷ್ಟವೂ ಇರಲಿಲ್ಲ. ಅವಳು ಜಾಣೆಯಾಗಿದ್ದಳು. ಆದರೆ ತನಗೆ ಬೇಕೆಂದಾಗ ಮೂರ್ಖಳಂತೆ ನಟಿಸುತ್ತಿದ್ದಳು. ಅವೆಲ್ಲವನ್ನೂ ಅವಳು ಸೇಡಿನಿಂದಲೇ ಮಾಡುತ್ತಿದ್ದಾಳೆಂದು ನನಗೆ ಗೊತ್ತಿತ್ತು. ಆದರೆ ಅವಳು ಹಾಗೆಲ್ಲ ಮಾಡಲು ನಾನೇನು ಮಾಡಿದೆನೆಂದು ನನಗೆ ಅರ್ಥವಾಗಲಿಲ್ಲ. ನನ್ನ ಸ್ಥಾನದಲ್ಲಿ ಬೇರೊಬ್ಬ ನಿದ್ದಿದ್ದರೆ ಅವಳ ಜುಟ್ಟು ಹಿಡಿದು ಆಚೆಗೆ ಒಗೆಯುತ್ತಿದ್ದ. ಆದರೆ ನಾನು ಇದಕ್ಕೆಲ್ಲ ಹೊಂದಿಕೊಂಡಿದ್ದೆ. ಮೇಲಾಗಿ ಅವಳ ಬಗ್ಗೆ ನನಗೆ ಕನಿಕರವಿತ್ತು.

ಆದರೆ ಬರಬರುತ್ತಾ ಪರಿಸ್ಥಿತಿ ತೀರಾ ಹದಗೆಟ್ಟಿತು. ನನಗೆ ದೆವ್ವ ವೇನೆಂದು ಗೊತ್ತಿರದಿದ್ದರೂ ಮನೆಯಲ್ಲೇ ದೆವ್ವದ ಅನುಭವವಾಗತೊಡಗಿತು. ಅವಳು ನಮ್ಮ ಮನೆಯಲ್ಲಿ ಬಹಳ ದಿನಗಳಿಂದಿದ್ದ, ಅತ್ಯಂತ ಸಭ್ಯಳಾದ ಹೆಣ್ಣಾಳಿ ನೊಡನೆ ಜಗಳ ತೆಗೆದು, ಅವಳನ್ನು ಮನೆಯಿಂದ ಓಡಿಸಿದಳು. ನಾನು

ಅವಳನ್ನೆಂದೂ ಮುಟ್ಟಿರಲಿಲ್ಲ. ಆದರೆ ಎಸ್ತರ್ ನನ್ನ ಅವಳ ಬಗ್ಗೆ ತೀರಾ ಕೆಟ್ಟದಾಗಿ ಯೋಚಿಸಿದಳು. ಯಾವ ಯಾವ ರೀತಿ ತೊಂದರೆಗಳನ್ನು ಮಾಡ ಬಹುದೆಂದು ಅವಳು ಹುಡುಕತೊಡಗಿದಳು. ಕುದುರೆಲಾಯದಲ್ಲಿದ್ದ ಹುಡುಗ ನೊಡನೆಯೂ ಜಗಳವಾಡಿದಳು. ಅವರಿಬ್ಬರೂ ಬಹಳ ವರ್ಷಗಳಿಂದ ನನಗಾಗಿ ದುಡಿದಿದ್ದರು. ಈಗ ಅವರು ಓಡಿಹೋಗುವುದು ಅನಿವಾರ್ಯವಾಯಿತು. ನನ್ನ ಕೆಲಸವಲ್ಲಿ ಇಂಥವರ ಅಗತ್ಯ ಬಹಳವಿರುತ್ತದೆ. ಎಲ್ಲ ಕೆಲಸಗಳನ್ನೂ ನಾವೇ ಮಾಡುವುದು ಸಾಧ್ಯವಿಲ್ಲ. ಕುದುರೆಗಳ ಮೈ ಉಜ್ಜಬೇಕು, ಲಾಯ ತೊಳೆದು ಶುಚಿಯಾಗಿಡಬೇಕು. ಮರಿಪಿಶಾಚಿಗಳು ರಾತ್ರಿ ಹೊತ್ತು ಕುದುರೆ ಲಾಯಗಳಿಗೆ ಬರುತ್ತವೆ. ದಯವಿಟ್ಟು ನಗಬೇಡಿ. ನಾನೇ ಕಣ್ಣಾರೆ ನೋಡುವವರೆಗೂ ನಾನಿದನ್ನು ನಂಬಿರಲಿಲ್ಲ. ನಾನು ಕುದುರೆಗಳನ್ನು ಕೊಂಡು ಲಾಯದಲ್ಲಿ ಬಿಡು ತ್ತಿದ್ದೆ. ಬೆಳಿಗ್ಗೆ ಬಂದು ನೋಡಿದರೆ ರಾತ್ರಿಯಿಡೀ ಹಳ್ಳ ಗುಡ್ಡಗಳಲ್ಲಿ ಓಡಿಸಿ ಓಡಿಸಿ ಸುಸ್ತು ಮಾಡಿದಂತೆ ಅವುಗಳ ಮೈಯಿಂದ ಬೆವರು ಹರಿಯುತ್ತಿತ್ತು. ಬಾಯಲ್ಲಿ ಜೊಲ್ಲು ಸುರಿಯುತ್ತಿತ್ತು. ಕುದುರೆಗಳ ಕತ್ತಿನ ಮೇಲಿನ ಉದ್ದ ಕೂದಲು ಜಡೆಯಂತೆ ಹೆಣೆದಿರುತ್ತಿತ್ತು. ರಾತ್ರಿ ಹೊತ್ತು ಕುದುರೆಗಳ ಕೂದಲಿಗೆ ಜಡೆಹಾಕಲು ಯಾರು ಬರುತ್ತಾರೆ ? ಇಂಥದು ಒಮ್ಮೆಯಲ್ಲ, ಹತ್ತಾರು ಬಾರಿ ನಡೆಯಿತು. ಆ ಮರಿಪಿಶಾಚಿಗಳು ಕುದುರೆಗಳು ಸಾಯುವಂತೆ ಕಾಡಬಲ್ಲುವು. ಹೀಗಾಗಿ ನಾನು ರಾತ್ರಿಹೊತ್ತು ಹೋಗಿ ಕಾಯಬೇಕಾಗುತ್ತಿತ್ತು. ಹುಡುಗ ಹೋದ ಮೇಲೆ ಅವನ ಕೆಲಸವೂ ನನಗೇ ಬಿತ್ತು. ಕೆಲಸದ ಒತ್ತಡ ಬಹಳ ಬೇಗ ಬೇಸರವನ್ನುಂಟುಮಾಡಿತು. ನಾನೇನಾದರೂ ಮಾತನಾಡಿದರೆ ಅವಳು ಉರಿದುಬೀಳುತ್ತಿದ್ದಳು. ಸುಮ್ಮನಿದ್ದರೆ ಅವಳನ್ನು ನಿರ್ಲಕ್ಷಿಸುತ್ತಿದ್ದೇನೆಂದು ದೂರುತ್ತಿದ್ದಳು.ಜಗಳವಾಡಲು ಅವಳು ಸುಮ್ಮನೆ ಏನನ್ನಾದರೂ ಕೆದಕುತ್ತಿದ್ದಳು. ನನಗೆ ಬರೆಯಲು ಬರುತ್ತಿರಲಿಲ್ಲ, ಅವಳು ನನಗೆ ಹೇಳಿಕೊಡಲು ಪ್ರಯತ್ನಿಸಿ ದಳು. ಒಂದು ಪಾಠ ಹೇಳಿಕೊಟ್ಟಳು ಅಷ್ಟೆ. ಕಾಲ ಕಳೆಯಲು ಇಸ್ಪೀಟ್ ಆಡುತ್ತಿದ್ದೆವು. ಅದರಲ್ಲೂ ಅವಳು ನನಗೆ ಮೋಸ ಮಾಡುತ್ತಿದ್ದಳು. ಅವಳು ನನಗೆ ಯಾಕೆ ಮೋಸ ಮಾಡಬೇಕಿತ್ತು ? ಕೇಳಿದಷ್ಟು ಹಣವನ್ನು ಅವಳಿಗೆ ನಾನು ಕೊಡುತ್ತಿದ್ದೆ.

